ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ

ಪ್ರಧಾನ ಸಂಪಾದಕ :
ಡಾ|| ಕೆ. ವಿ. ಪುಟ್ಟಪ್ಪ, ಎಂ.ಎ., ಡಿ.ಲಿಟ್.

# ತೆಲುಗು ಪಾಠಗಳು

ಕೆ. ಸುಬ್ಬರಾಮಪ್ಪ, ಎಂ.ಎ., ಬಿ.ಇಡಿ.,





ಮೈಸೂರು
ಮೈಸೂರು ವಿಶ್ವವಿದ್ಯಾನಿಲಯ
೧೯೬೯

ಸಾ|| ಸಾ ಪ್ರತಿ ೩-೭೫]  [ಉತ್ತಮ ಪ್ರತಿ ೪-೭೫

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆ–೪೪

ಪ್ರಧಾನ ಸಂಪಾದಕ :
ಡಾ॥ ಕೆ. ವಿ. ಪುಟ್ಟಪ್ಪ, ಎಂ.ಎ., ಡಿ.ಲಿಟ್.

# ತೆಲುಗು ಪಾಠಗಳು

ಸಂಪಾದಕ :
ವಿದ್ವಾನ್ ಕೆ. ಸುಬ್ಬರಾಮಪ್ಪ, ಎಂ.ಎ., ಬಿ.ಇಡಿ.

ಮೈಸೂರು
ಮೈಸೂರು ವಿಶ್ವವಿದ್ಯಾನಿಲಯ
೧೯೫೯

# ಮುನ್ನುಡಿ

ಕನ್ನಡದ ವ್ಯಾಸಂಗಕ್ಕೆ ಇತರ ದ್ರಾವಿಡ ಭಾಷೆಗಳ ಪರಿಚಯ ಸಹಾಯಕವಾಗುತ್ತದೆ. ಅದರಲ್ಲಿಯೂ ಕನ್ನಡ ಭಾಷಾ ಸಾಹಿತ್ಯಗಳ ಆಳವಾದ ಅಭ್ಯಾಸ ಕೃಷಿಗಳಿಗೆ ತಮಿಳು ಮತ್ತು ತೆಲುಗು ಭಾಷಾ ಸಾಹಿತ್ಯಗಳ ಪರಿಚಯ ಬಹಳ ಸಹಕಾರಿಯಾಗುತ್ತದೆ. ಅಷ್ಟೇ ಅಲ್ಲ, ಆ ಪರಿಚಯ ಆವಶ್ಯಕವೆನ್ನಲೂಬಹುದು. ಈ ಕಾರಣದಿಂದಲೇ ನಮ್ಮ ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಪ್ರೌಢವ್ಯಾಸಂಗದ ವಿದ್ಯಾರ್ಥಿಗಳು ತೆಲುಗನ್ನೋ ತಮಿಳನ್ನೋ ಕಲಿಯಲು ಏರ್ಪಾಟುಮಾಡಿದೆ ಈ ವಿದ್ಯಾರ್ಥಿಗಳ ಆವಶ್ಯಕತೆಯನ್ನು ಗಮನಿಸಿಯೇ ಈ ಸಂಕಲನವನ್ನು ಏರ್ಪಡಿಸಿದೆ. ಇದರಲ್ಲಿ ತೆಲುಗು ಸಾಹಿತ್ಯದ ಬೇರೆ ಬೇರೆ ಪ್ರಕಾರಗಳ ಪ್ರಾತಿನಿಧ್ಯ ಬರುವಂತೆ ಆಯ್ಕೆ ಮಾಡಿದೆ. ಈ ಸಂಕಲನದಿಂದ ಹಕ್ಕಿನೋಟದ ಸ್ಥೂಲಪರಿಚಯ ಮಾತ್ರ ಆಗುತ್ತದೆಯೇ ಹೊರತು ಬೇರೆಯಲ್ಲ ಇದು ಪ್ರವೇಶಿಕೆ ಮಾತ್ರ. ಆಳವೂ ವಿಸ್ತಾರವೂ ಆದ ತೆಲುಗು ವ್ಯಾಸಂಗಕ್ಕೆ ಬೇರೆ ಮಾರ್ಗ, ಬೇರೆ ಸಾಧನಗಳು ಇವೆ. ಈ ಸಂಕಲನವನ್ನು ನಿರ್ವಹಿಸಿದ ಶ್ರೀ ಕೆ. ಸುಬ್ಬರಾಮಪ್ಪನವರು ನಮ್ಮ ವಿಶ್ವವಿದ್ಯಾನಿಲಯದಲ್ಲಿ ತೆಲುಗು ಶಾಖೆಯ ಅಧ್ಯಕ್ಷರಾಗಿದ್ದಾರೆ. ತೆಲುಗನ್ನು ತೆಗೆದುಕೊಳ್ಳುವ ಕನ್ನಡ ವಿದ್ಯಾರ್ಥಿಗಳಿಗೆ ಇದರಿಂದ ಸಾಕಷ್ಟು ಸಹಾಯ ದೊರೆಯುವುದೆಂದು ಹೇಳಬಹುದು.

ಮೈಸೂರು
೨೪–೧೨–೧೯೫೪

ಕೆ. ವಿ. ಪುಟ್ಟಪ್ಪ,
ಸಮಿತಿಯ ಅಧ್ಯಕ್ಷರು.

# ತೆಲುಗು ಸಾಹಿತ್ಯದ ಸ್ಥೂಲ ಪರಿಚಯ

ಆಂಧ್ರರ ಚರಿತ್ರೆಯು ಪುರಾತನವಾದುದು. ರಾಮಾಯಣ ಮಹಾಭಾರತಗಳಲ್ಲಿ ಅವರು ಆಳರಸರಾಗಿದ್ದ ಉಲ್ಲೇಖವಿದೆ. ಹಾಗೆಯೇ ತೆಲುಗು ಸಾಹಿತ್ಯವೂ ಪುರಾತನವಾದುದು. ಮತಧರ್ಮವು ಮೊಟ್ಟಮೊದಲು ಸಾಹಿತ್ಯದ ಊರುಗೋಲಾಗಿತ್ತು. ಇತಿಹಾಸ ಪ್ರಸಿದ್ಧರಾದ ಶಾತವಾಹನರು ಆಂಧ್ರ ರಾಜರು. ಅವರು ಬೌದ್ಧಮತಾವಲಂಬಿಗಳು. ಆ ಕಾಲದ ಸಾಹಿತ್ಯ ಪ್ರಾಕೃತದಲ್ಲಿದೆ. ಈ ಆಂಧ್ರರನ್ನು ಗೆದ್ದ ಪಲ್ಲವರು ಜೈನಮತೀಯರು. ಇವರೂ ಸಾಹಿತ್ಯವನ್ನು ಪೋಷಿಸಿದರು. ಅಂದಿನಿಂದ ಇಂದಿನವರೆಗೂ ಈ ಸಾಹಿತ್ಯವಾಹಿನಿ ಎಡೆಬಿಡದೆ ಹರಿದುಬಂದಿದೆ.

ಹೀಗೆ ಹರಿದುಬಂದ ಸಾಹಿತ್ಯವಾಹಿನಿಯಲ್ಲಿ ಪ್ರಮುಖವಾದ ಐದು ಘಟ್ಟಗಳನ್ನು ಗುರುತಿಸಬಹುದು;

೧. ಇತಿಹಾಸದ ಆದಿಯಿಂದ ಕ್ರಿ. ಶ. ೧೧ನೇ ಶತಕದವರೆಗೆ.

೨. ಕ್ರಿ. ಶ. ೧೧ನೇ ಶತಮಾನದಿಂದ ೧೪ನೇ ಶತಮಾನದವರೆಗೆ.

೩. ಕ್ರಿ. ಶ. ೧೪ನೇ ಶತಮಾನದಿಂದ ೧೬ನೇ ಶತಕ ಪೂರ್ತಿ.

೪. ಕ್ರಿ. ಶ. ೧೭ನೇ ಶತಕದಿಂದ ೧೮ನೇ ಶತಕ ಪೂರ್ತಿ.

೫. ಕ್ರಿ. ಶ. ೧೯ನೇ ಶತಕದಿಂದ ಇಲ್ಲಿನವರೆಗೆ.

ಹೀಗೆ ಐದು ವಿಭಾಗ ಮಾಡಬಹುದು. ತೆಲುಗು ಸಾಹಿತ್ಯವಾಹಿನಿ ಕಿರುದೊರೆಯಾಗಿ ಇತಿಹಾಸದ ಆರಂಭದಿಂದ ಹನ್ನೊಂದನೆ ಶತಕದವರೆಗೂ ಬಳೆದು ಬಂತು. ಈ ಕಾಲವನ್ನು ಜಾನಪದ ಗೀತೆಗಳ ಕಾಲ ಅಥವಾ ದೇಶೀಯ ಕವಿತೆಗಳ ಕಾಲವೆನ್ನಬಹುದು. ಈ ಕಾಲದಲ್ಲಿ ಕವಿಯು ಒಬ್ಬ ಪ್ರವಾಧಿಯೆಂದೂ ಅವನಲ್ಲಿ ಶಾಪಾನುಗ್ರಹಶಕ್ತಿ ಇದ್ದಿತೆಂದೂ ಜನರು ಭಾವಿಸಿದ್ದರು. ವೇಮುಲವಾಡ ಭೀಮಕವಿ ಶಪಿಸಿದ ಮಾತ್ರದಿಂದಲೇ ಕಳಿಂಗ ಗಂಗುವಿಗೆ ರಾಜ್ಯಭ್ರಷ್ಟತ್ವ ಒದಗಿತೆಂದೂ ಪೋತರಾಜನ ಪತ್ನಿಗೆ ಪತಿಪ್ರಾಪ್ತಿಯ ಆಶೀರ್ವಾದ ಮಾಡಿದ ಮಾತ್ರದಿಂದ ಗತಿಸಿದ್ದ ಪೋತರಾಜ ಬದುಕಿದನೆಂದೂ ಒಂದು ಐತಿಹ್ಯ ಬೆಳೆದುಬಂದಿದೆ. ಅನಂತರ, ಕವಿಗಳೂ ಪಂಡಿತರೂ ಶಾಸ್ತ್ರನಿಪುಣರೂ ಆಗಿ ಗೌರವಾನ್ವಿತರಾದರು.

ಸಾಮ್ರಾಜ್ಯಗಳ ವೈಭವದೊಡನೆ ಸುಖಿಗಳಾಗಿ ಇದ್ದು ಅವುಗಳ ಅವನತಿಯೊಂದಿಗೆ ಉಪಜೀವಿ ಕವಿಗಳಾಗಿ ಬದುಕಿದರು.

ಮೊದಲಘಟ್ಟಕ್ಕೆ ಸೇರಿದ ಕವಿಗಳನ್ನು ಪ್ರಮುಖವಾಗಿ ಜಾನಪದ ಕವಿಗಳೆನ್ನಬಹುದು. ಜೋಗುಳ (ಲಾಲಿ ಪಾಟಲು), ಮಂಗಳಗೀತೆ, ಜಾವಳಿ, ಕೀರ್ತನೆ, ಸುಗ್ಗಿಯ ಹಾಡುಗಳು, ಆಗ ಹೆಚ್ಚಾಗಿ ಬೆಳೆದಿದ್ದುದನ್ನು ನಾವು ಕಾಣಬಹುದು.

ಕ್ರಿ. ಶ. ೧೧ನೆಯ ಶತಮಾನದ ಆರಂಭದಲ್ಲಿ ವೈದಿಕ ಮತಗಳು ಪ್ರಾಬಲ್ಯಕ್ಕೆ ಬಂದು ಅವೈದಿಕಗಳಾದ ಜೈನ ಬೌದ್ಧಮತಗಳನ್ನು ಹಿಂದಿಕ್ಕಿದುವು. ಈ ಕಾಲದಲ್ಲಿ ಮತಪ್ರಚಾರದ ಸಲುವಾಗಿ ಇತಿಹಾಸ ಪುರಾಣಗಳನ್ನು ತೆಲುಗಿಗೆ ಪರಿವರ್ತಿಸತೊಡಗಿದರು. ಈ ಯುಗವನ್ನು ಮಹಾಕಾವ್ಯಗಳ ಯುಗವೆನ್ನಬಹುದು. ಈ ಕಾಲದಲ್ಲಿ ಭಾಷಾಂತರವಾದ ಗ್ರಂಥಗಳೇ ಹೆಚ್ಚು. ಆದಿಕವಿಯಾದ ನನ್ನಯಭಟ್ಟಾರಕನು ಕನ್ನಡಕವಿ ನಾರಾಯಣಭಟ್ಟನ ಸಹಾಯದಿಂದ ರಾಜಮಹೇಂದ್ರಿಯ ರಾಜರಾಜನರೇಂದ್ರನ ಆಶ್ರಯದಲ್ಲಿ ವ್ಯಾಸಭಾರತವನ್ನು ಪರಿವರ್ತಿಸಿದನು. ಈತನು ಪರಿವರ್ತಿಸದೆ ಉಳಿದ ಭಾಗವನ್ನು ೧೩ ಮತ್ತು ೧೪ನೇ ಶತಕಗಳ ಕವಿಗಳಾದ ತಿಕ್ಕನ ಸೋಮಯಾಜಿ ಮತ್ತು ಎಱ್ರಾಪ್ರೆಗ್ಗಡ ಇವರು ತೆಲುಗಿಗೆ ಪರಿವರ್ತಿಸಿದರು. (ನನ್ನಯ ಆದಿಪರ್ವ, ಸಭಾಪರ್ವ, ಅರಣ್ಯಪರ್ವದ ಅರ್ಧದವರೆಗೆ ಬರೆದು ಗತಿಸಿದನು. ತಿಕ್ಕನ ಸೋಮಯಾಜಿ ವಿರಾಟಪರ್ವದಿಂದ ಪೂರ್ತಿಮಾಡಿದನು. ಎಱ್ರಾಪ್ರೆಗ್ಗಡ ಅರಣ್ಯಪರ್ವದ ಶೇಷವನ್ನು ಪೂರ್ಣಮಾಡಿದನು. ಇವರಿಗೆ ತೆಲುಗು ಸಾಹಿತ್ಯದಲ್ಲಿ " ಕವಿತ್ರಯ " ರೆಂದು ಹೆಸರು. ಕನ್ನಡ ಸಾಹಿತ್ಯದಲ್ಲಿ ಪಂಪ, ಪೊನ್ನ, ರನ್ನ ಹೇಗೋ ಹಾಗೆಯೇ ಇವರೂ ಪೂರ್ವ ಕವಿಗಳಲ್ಲಿ ಹೆಸರು ಪಡೆದವರು )

೧೨ನೇ ಶತಮಾನದಲ್ಲಿ ಬಸವೇಶ್ವರನಿಂದ ಸ್ಥಾಪಿತವಾದ ವೀರಶೈವ ಮತದ ಪ್ರಚಾರಕ್ಕಾಗಿ ಪಾಲ್ಕುರಿಕಿ ಸೋಮನಾಥ ಕವಿಯು ಸಂಸ್ಕೃತ ಕರ್ಣಾಟಕಾಂಧ್ರ ಭಾಷೆಗಳಲ್ಲಿ ಕಾವ್ಯಗಳನ್ನು ರಚಿಸಿದನು. ಈತ ಜನ ಬಳಕೆಯ ದ್ವಿಪದಿಯ ಛಂದಸ್ಸಿನಲ್ಲಿ "ಬಸವ ಪುರಾಣ"ವನ್ನು ರಚಿಸಿದನು. ಇದನ್ನು ಕನ್ನಡ ಕವಿಯಾದ ಭೀಮಕವಿ ಕನ್ನಡಕ್ಕೆ ಪರಿವರ್ತನೆ

ಮಾಡಿದ್ದಾನೆ. "ಪಂಡಿತಾರಾಧ್ಯ ಚರಿತ್ರೆ" ಯು ಸೋಮನಾಥನ ಇನ್ನೊಂದು ಕಾವ್ಯ. ಈ ಕಾಲದಲ್ಲಿಯೇ ಶತಕಗಳು ಹುಟ್ಟಿ ವೇಮನನ ಕಾಲದಲ್ಲಿ ಅಭಿವೃದ್ಧಿ ಹೊಂದಿದುವು. ಸೋಮನಾಥನೇ ಶತಕಮಾರ್ಗಕ್ಕೆ ಪ್ರವರ್ತಕನಾಗಿ "ವೃಷಾಧಿಪ ಶತಕ"ವನ್ನು ರಚಿಸಿದನು. ಇದು ತೆಲುಗಿನ ಮೊದಲನೇ ಶತಕ. ದೈವಭಕ್ತಿ, ನೀತಿ, ಮತಪ್ರಚಾರಕ್ಕೆ ಈ ಕಾವ್ಯಗಳು ಸಾಧನಗಳಾದುವು. ವೇಮನನು "ವಿಶ್ವದಾಭಿರಾಮ ವಿನುರವೇಮ" ಎಂಬ ಮುದ್ರೆಯಲ್ಲಿ ವಚನಗಳನ್ನು ಹಾಡಿದನು. ಇವನು ಕರ್ಣಾಟಕ ಸರ್ವಜ್ಞನ ಸಮಕಾಲೀನ ಎಂದು ಹೇಳಲಾಗಿದೆ. ಈತನ ವಚನಗಳು ಸರ್ವಜ್ಞನ ವಚನಗಳಂತೆ ತೆಲುಗು ದೇಶದಲ್ಲಿ ಜನಪ್ರಿಯವಾಗಿವೆ.

ಪಾಕನಾಡಿನ ಚೋಡರಾಜನಾದ ನನ್ನೆಚೋಡದೇವನು ಕಾಳಿದಾಸನ 'ಕುಮಾರ ಸಂಭವ'ವನ್ನು ಪದ್ಯಕಾವ್ಯವಾಗಿ ರಚಿಸಿದನು. ವಿಜಯನಗರದ ಬುಕ್ಕರಾಯನ ಆಸ್ಥಾನ ಕವಿಯಾದ ನಾಚನ ಸೋಮನು 'ಉತ್ತರ ಹರಿವಂಶ'ವನ್ನು ರಚಿಸಿದನು.

ಅನಂತರ ಬಂದ ಪೋತನ, ಶ್ರೀನಾಥ ಕವಿಗಳು ಪ್ರಬಂಧ ಯುಗಕ್ಕೆ ಮಾರ್ಗದರ್ಶಿಗಳಾದರು. ಶ್ರೀನಾಥನು ಭೋಗಕವಿ. ಐಹಿಕ ಸುಖವನ್ನು ಆನಂದದಿಂದ ಅನುಭವಿಸಿದನು. ಅದಕ್ಕಾಗಿ ದೇಶದೇಶಗಳಲ್ಲಿ ಸುತ್ತಿ ಅನೇಕ ರಾಜಾಸ್ಥಾನಗಳಲ್ಲಿ ಇದ್ದು ಮಾನಿತನಾಗಿ ವಿಜಯನಗರದ ಪ್ರೌಢರಾಯನಿಂದ ಮುತ್ತುಗಳ ಮಂಟಪದಲ್ಲಿ ಕನಕಾಭಿಷೇಕ ಹೊಂದಿದನು. ಈತನ ಕಾಲದಲ್ಲಿಯೇ ಸಮಸ್ಯಾಪೂರ್ಣ, ಚಿತ್ರಕವಿತೆ, ಚಾಟು ಪದ್ಯಗಳು, ಆಶುಕವಿತ್ವ ಮುಂತಾದ ಪ್ರಕಾರಗಳು ಪ್ರಾರಂಭವಾದುವು. ಈತನ ಗ್ರಂಥಗಳು: ಶಿವರಾತ್ರಿ ಮಹಾತ್ಮ್ಯಮು, ಹರವಿಲಾಸಮು, ಶೃಂಗಾರ ನೈಷಧಮು, ಕಾಶೀಖಂಡಮು, ಭೀಮಖಂಡಮು ಮುಂತಾದವು. ಇವನ ಭಾವಮೈದುನ ಪೋತನಕವಿ ಭಕ್ತಿಯನ್ನು ಹಿಡಿದು ಮುಕ್ತಿಯನ್ನು ಸಾಧಿಸಲುವಾಗಿ ರಾಜರಿಗೆ ಅಂಕಿತ ಮಾಡಿದ್ದರೆ ಸಿಕ್ಕಬಹುದಾಗಿದ್ದ ಐಹಿಕ ಸುಖವನ್ನು ತ್ಯಾಜ್ಯಮಾಡಿ ತನ್ನ "ಭಾಗವತ"ವನ್ನು ಶ್ರೀರಾಮನಿಗೆ ಅಂಕಿತ ಮಾಡಿದನು. ಈತ ರಾಜರಿಗೆ ಕಾವ್ಯ ಅಂಕಿತ ಮಾಡುವುದು ಕನ್ಯಾವಿಕ್ರಯ ಸಮಾನವೆಂದು ಹೇಳಿದ್ದಾನೆ. ಇದು ತೆಲುಗು ಸಾಹಿತ್ಯದ

ಉತ್ತಮ ಕಾವ್ಯಗಳಲ್ಲಿ ಜನಪ್ರಿಯವಾಗಿದೆ. ಶ್ರೀನಾಥನು ತನ್ನ ಅವಸಾನ ಕಾಲದಲ್ಲಿ ಬಡತನದಿಂದ ವ್ಯಥಿತನಾಗಿ ಬಾಳನ್ನು ಮುಗಿಸಿದನು. ಪೋತನ ತನ್ನ ಕಾವ್ಯರಚನೆಯ ಮೂಲಕವೇ ಆನಂದದಿಂದ ಮೋಕ್ಷಮಾರ್ಗವನ್ನು ಹಿಡಿದನು.

ಪ್ರಬಂಧ ರಚನೆಯು ಕೃಷ್ಣದೇವರಾಯನ ಕಾಲದಲ್ಲಿ ವಿಶೇಷವಾಗಿ ಬೆಳೆಯಿತು. ಈ ಕಾಲವನ್ನು ತೆಲುಗು ಸಾಹಿತ್ಯದ "ಸ್ವರ್ಣಯುಗ"ವೆನ್ನುತ್ತಾರೆ. ಮೂರು ರಾಯರ ಗಂಡನಾಗಿ ಮೆರೆದ ಆ ಸಾಮ್ರಾಟನ ಆಸ್ಥಾನದಲ್ಲಿ ಅಷ್ಟದಿಗ್ಗಜಗಳೆಂದು ಪ್ರಸಿದ್ಧರಾದ ಎಂಟು ಜನ ತೆಲುಗು ಕವಿಗಳಿದ್ದರು. ಅವರಲ್ಲಿ ಅಲ್ಲಸಾನಿ ಪೆದ್ದನನು ಪ್ರಮುಖನಾದವನು. ಈ ಕಾಲದ ಕಾವ್ಯಗಳಲ್ಲಿ ಸಾಂಪ್ರದಾಯಿಕ ಅಷ್ಟಾದಶ ವರ್ಣನೆಗಳು ತುಂಬಿರುತ್ತವೆ. ಅಲ್ಲಸಾನಿ ಪೆದ್ದನನು 'ಆಂಧ್ರಕವಿತಾ ಪಿತಾಮಹ'ನೆಂದು ಬಿರುದಾಂಕಿತನಾದನು. ಇವನ ಕೃತಿ 'ಮನುಚರಿತ್ರ'. ತಾನೇ ತೆಲುಗು ಕವಿಯಾದ ಕೃಷ್ಣರಾಯನು ("ಆಮುಕ್ತಮಾಲ್ಯದ" ಇವನ ಕೃತಿ) ಅನೇಕ ಕವಿಗಳಿಗೆ ಆಶ್ರಯದಾತನಾಗಿದ್ದನು. ನಂದಿತಿಮ್ಮನ, ರಾಮರಾಜಭೂಷಣ (ಭಟ್ಟುಮೂರ್ತಿ) ತೆನಾಲಿರಾಮಲಿಂಗಕವಿ, ಮಾದಯಗಾರಿ ಮಲ್ಲನ, ಧೂರ್ಜಟಿಕವಿ, ಪಿಂಗಳಿಸೂರನ ಮುಂತಾದ ಕವಿಗಳು ಈ ಕಾಲದಲ್ಲಿ ಉತ್ತಮ ಕಾವ್ಯಗಳನ್ನು ರಚಿಸಿದ್ದಾರೆ. ಕೃಷ್ಣದೇವರಾಯನಿಗೂ ಅವನ ರಾಣಿ ಚಿನ್ನಾದೇವಿಗೂ ಉದ್ಭವಿಸಿದ ಪ್ರಣಯಕಲಹದ ಉಪಶಮನಾರ್ಥವಾಗಿ ನಂದಿತಿಮ್ಮನನು "ಪಾರಿಜಾತಾಪಹರಣ" ಎಂಬ ಕಾವ್ಯವನ್ನು (ಪ್ರಬಂಧವನ್ನು) ರಚಿಸಿದ್ದಾನೆ. ಆಗ, ರಾಜ್ಯದಲ್ಲಿ ಶಾಂತಿ ನೆಲೆಸಿದ್ದು ಜನಗಳು ಸುಖಭೋಗಗಳಲ್ಲಿ ಮುಳುಗಿದ್ದರೆಂದು ಇವರ ಕಾವ್ಯಗಳಿಂದ ತಿಳಿದು ಬರುತ್ತದೆ.

ಮುಂದಿನ ಎರಡು ಶತಮಾನಗಳನ್ನು ಅವನತಿಯ ಯುಗ, ಪ್ರತಿಭಾ ದಾರಿದ್ರ್ಯ ಸಾಹಿತ್ಯದ ಯುಗ, ಉಪಜೀವಿ ಕವಿಗಳ ಯುಗವೆನ್ನಬಹುದು. ಮುಂದಿನ ಎರಡು ಶತಮಾನದಲ್ಲಿ ಕಂಡುಬರುವ ಸಾಹಿತ್ಯದ ದಾರಿದ್ರ್ಯದ ಕರಾಳಛಾಯೆ ಕೃಷ್ಣದೇವರಾಯನ ಕಾಲದಿಂದಲೂ, ಅದಕ್ಕೂ ಹಿಂದಿನಿಂದಲೂ ಮೊದಲಾಗಿದ್ದಿತೆಂದು ಊಹಿಸಬಹುದು. "ಕವಿಗೆ ಕವಿ ಮುನಿವಂ" ಎಂಬ ಉಕ್ತಿಗನುಗುಣವಾಗಿ ವ್ಯಕ್ತಿಯ ಅಸೂಯೆಯ ಪರಿ

ಣಾಮವಾಗಿ ಆತನಿಗಿಂತಲೂ ಹಿಂದೆ ಅಥರ್ವಣನಿಂದ ರಚಿತವಾದ ಭಾರತ ನಷ್ಟವಾಯಿತೆಂದು ಒಂದು ಐತಿಹ್ಯವಿದೆ. ಮಧ್ಯಕಾಲದಲ್ಲಿ ಕವಿತಾರಚನೆ ಒಂದು ಉದ್ಯೋಗವಾಗಿ ಪರಿಣಮಿಸಿತು. ರಾಜರಿಗೆ ಕೃತಿಯನ್ನು ಅಂಕಿತ ಮಾಡಿದರೆ ಅವರು ಸಂತುಷ್ಟರಾಗಿ ಅಗ್ರಹಾರ, ಭೂಷಣಾದಿ ಸುವಸ್ತು ಗಳನ್ನಿತ್ತು ಮನ್ನಿಸುತ್ತಿದ್ದರು. ಇದಕ್ಕಾಗಿ ಕವಿಗಳು ಪ್ರಭಾವಿತರ ಬಳಿ ಅನೇಕ ವರ್ಷ ಊಳಿಗ ಕೈಗೊಂಡು ಕೊನೆಗೊಮ್ಮೆ ರಾಜಾಸ್ಥಾನ ದಿಂದ ಮಾನಿತರಾಗಬೇಕಾಗಿದ್ದಿತು. ಅಲ್ಲಸಾನಿ ಪೆದ್ದನ ಮನಸ್ಸುಮಾಡದ ಪ್ರಯುಕ್ತ ಸಂಕುಸಾಲ ನೃಸಿಂಹಕವಿ ಜೀವನಾರ್ಥವಾಗಿ ತನ್ನ ಕೃತಿಯನ್ನು ಮಾರಬೇಕಾಯಿತಂತೆ. ಕೃಷ್ಣದೇವರಾಯನ ಮಗಳು ಮೋಹನಾಂಗಿ ಅದನ್ನು ಕೊಂಡು ಅವುಗಳ ಹೆಚ್ಚುಗಳನ್ನು ದೊರೆಗೆ ತಿಳಿಸಿದಳು. ಹೀಗೆ ಬೆಳೆದ ಪರಸ್ಪರ ಅಸೂಯೆಗೆ ತಕ್ಕ ಶಿಕ್ಷೆಯಾಯಿತೋ ಎನ್ನುವಂತೆ ತಾಳಿಕೋಟೆಯ ಯುದ್ಧದ ಅನಂತರದಲ್ಲಿ ಸ್ವತಂತ್ರರಾದ ಸಾಮಂತರ ಸಣ್ಣಪುಟ್ಟ ಪಾಳೆಯಗಾರರ ಕೃಪಾಶ್ರಯದಲ್ಲಿ ಉಪಜೀವಿ ಕವಿಗಳು ಕವಿತ್ವವನ್ನು ಹೊಸೆದು ಅಜ್ಞಾತ ವಾಗಿ ಜೀವನ ನಿರ್ವಹಣ ಮಾಡಬೇಕಾಯಿತು. ಇದರಲ್ಲೂ ಅಲ್ಲಲ್ಲಿ ಉತ್ತಮ ಗ್ರಂಥಗಳು ದೊರೆಯುತ್ತವೆ. ಹೀಗೆ ಈರ್ಷ್ಯಾಊಷರ ಭೂಮಿ ಯಲ್ಲಿ ಸಾಹಿತ್ಯವಾಹಿನಿ ಇಂಗಿಹೋದುದನ್ನು ನಾವು ನೋಡುತ್ತೇವೆ. ಈ ಕಾಲದ ಕವಿಗಳು ಪೆನುಗೊಂಡ, ಚಂದ್ರಗಿರಿ, ತಂಜಾವೂರು, ಪುದುಕ್ಕೋಟೆ, ಮಧುರ, ಮುಂತಾದ ರಾಜ್ಯಗಳಿಗೆ ಹೊರಟರು. ಮೈಸೂರು ರಾಜ್ಯದಲ್ಲಿ ಕೂಡ ಅಜ್ಞಾತವಾಗಿ ಕೆಲವರು ಗ್ರಂಥರಚನೆ ಮಾಡುತ್ತಿದ್ದರು. ಈ ಕಾಲದಲ್ಲಿಯೇ ಮೈಸೂರು ರಾಜ್ಯದಲ್ಲಿ ೧೬೭೦-೧೭೦೪ರಲ್ಲಿ ಚಿಕ್ಕದೇವರಾಯನ ದಳವಾಯಿಯಾದ ಕಳಲೆ ವೀರರಾಜನು ಕವಿತ್ರಯರು ರಚಿಸಿದ ಚಂಪೂ ಭಾರತವನ್ನು ತೆಲುಗು ವಚನದಲ್ಲಿ ಬರೆದನು. ವಚನ ರಚನೆಯನು ಆಂಧ್ರ ಸಾಹಿತ್ಯದಲ್ಲಿ ಮೊದಲು ಮಾಡಿದವನು ಈತನೇ. ಇದಕ್ಕೆ ಪೂರ್ವ ಭಾವಿಯಾಗಿ ತೆಲುಗು ಸಾಹಿತ್ಯದಲ್ಲಿ ಪ್ರತ್ಯೇಕವಾಗಿ ವಚನಕಾವ್ಯಗಳು ಇರ ಲಿಲ್ಲ. ಇಪ್ಪತ್ತನೆಯ ಶತಮಾನದಲ್ಲಿ ಈ ಸಾಹಿತ್ಯವು ಅಖಂಡವಾಗಿ ಬೆಳೆ ಯುತ್ತಾ ಬಂದಿದೆ. ತಂಜಾವೂರು ಸರಸ್ವತೀ ಮಹಲ್ ಪುಸ್ತಕ ಭಂಡಾರ ದಲ್ಲಿರುವ ತೆಲುಗು ಓಲೆಯಗರಿಯ ಗ್ರಂಥಗಳನ್ನು ಮದ್ರಾಸು ಸರ್ಕಾರ

ಇತ್ತೀಚೆಗೆ ಅಚ್ಚುಹಾಕಿಸಿವೆ*

ತೆಲುಗು ಸಾಹಿತ್ಯದಲ್ಲಿ ಮಹಿಳೆಯರೂ ಕೃತಿಗಳನ್ನು ರಚಿಸಿರುವುದು ಕಂಡು ಬರುತ್ತದೆ. ಕನ್ನಡಕವಿ ನಾರಾಯಣಭಟ್ಟನ ಮಗಳು ಕುಪ್ಪಮ್ಮ ಹನ್ನೊಂದನೆಯ ಶತಮಾನದಲ್ಲಿ ಕೃತಿ ರಚನೆ ಮಾಡಿದ್ದಾಳೆ. ಹದಿನಾರನೇ ಶತಕದಲ್ಲಿ ಕುಮ್ಮರ ಮೊಲ್ಲ ಎಂಬಾಕೆ "ಮೊಲ್ಲ ರಾಮಾಯಣಮು" ಎಂಬ ಕಾವ್ಯವನ್ನು ರಚಿಸಿದ್ದಾಳೆ. ಕೃಷ್ಣದೇವರಾಯನ ಮಗಳಾದ ಮೋಹನಾಂಗಿ 'ಮಾರೀಚ ಪರಿಣಯು'ವನ್ನು ವಿರಚಿಸಿದ್ದಾಳೆ. ವೇಶ್ಯಾಕುಲದವಳಾದ ಮುದ್ದುಪಳನಿ ಎಂಬಾಕೆ "ರಾಧಿಕಾ ಸಾಂತ್ವನಮು" ಎಂಬ ಗ್ರಂಥವನ್ನೂ ತರಿಗೊಂಡ ವೆಂಕಮ್ಮ 'ವೆಂಕಟೇಶ ಮಹಾತ್ಮ್ಯೆ' ವನ್ನೂ ರಚಿಸಿರುವುದು ಕಂಡುಬರುತ್ತದೆ.

ಹೀಗೆ ಕೃಶವಾದ ಸಾಹಿತ್ಯವಾಹಿನಿ ಆಂಗ್ಲಪ್ರಭುತ್ವದ ಸಂಪರ್ಕದಿಂದ ಪಾಶ್ಚಾತ್ಯ ಸಾಹಿತ್ಯದ ಪ್ರಭಾವದಿಂದ ಪುಷ್ಟಗೊಂಡು ನಾನಾಮುಖವಾಗಿ ಭೋರ್ಗರೆದು ಹರಿಯತೊಡಗಿದೆ.

ಈ ಶತಮಾನದಲ್ಲಿ ಕಾವ್ಯಪ್ರಕಾರಗಳ ವೈವಿಧ್ಯ ಬೆಳೆಯಿತು. "ಗದ್ಯಂ ಕವೀನಾಂ ನಿಕಷಮ್ ವದಂತಿ" ಎಂಬ ಉಕ್ತಿಯಂತೆ, ತೆಲುಗು ಕವಿಗಳಿಗೆ ಪದ್ಯಕರ್ತನೇ ಕವಿಯೆಂದಿದ್ದ ಭಾವನೆ ತಪ್ಪಿ ಗದ್ಯದಲ್ಲಿ ಸಾಹಿತ್ಯ ರಚನೆ ಆರಂಭವಾಯಿತು. ಕಂದುಕೂರು ವೀರೇಶಲಿಂಗಮು ಪಂತುಲು, ಚಿಲಕಮರ್ತಿ ಲಕ್ಷ್ಮೀನರಸಿಂಹಮು ಮುಂತಾದವರು ಈ ಕಾಲದ ಉತ್ತಮ ಗ್ರಂಥಕರ್ತರು. ಸಾಹಿತ್ಯವೃಕ್ಷ ನಾಟಕ, ಕಾದಂಬರಿ, ಕಥೆ, ಭಾವಗೀತೆ, ವಿಮರ್ಶೆ ಮುಂತಾಗಿ ಹಲವಾರು ಕವಲೊಡೆದಿದೆ. ಇವುಗಳನ್ನು ಮೂರು ಬಗೆಯಾಗಿ ವಿಂಗಡಿಸಬಹುದು: (೧) ವಿಮರ್ಶಾತ್ಮಕ (ಹಿಂದಿನ ಮತ್ತು ಇಂದಿನ ಕಾವ್ಯಗಳ ಉತ್ತಮ, ಮಧ್ಯಮ, ಅಧಮ ವಿಂಗಡನೆ ಮತ್ತು

* ತಂಜಾವೂರು ನಾಯಕ ಅರಸನಾದ ರಘುನಾಥನಾಯಕನು 'ರಘುನಾಥ ರಾಮಾಯಣಮು', "ವಾಲ್ಮೀಕಿ ಚರಿತ್ರ", "ನಲಚರಿತ್ರ"(ದ್ವಿಪದಿಯಲ್ಲಿ) ಮುಂತಾದ ಕೃತಿಗಳನ್ನು ರಚಿಸಿರುವುದಲ್ಲದೆ ಚೇಮಕೂರಿ ವೆಂಕಟಕವಿಯ 'ವಿಜಯವಿಲಾಸ' ವನ್ನು ಕೃಷ್ಣಾಧ್ವರಿ 'ನೈಷಧಪಾರಿಜಾತೀಯ'ವನ್ನು ಅಂಕಿತಮಾಡಿಕೊಂಡು ಅವರನ್ನು ಪೋಷಿಸಿದನು.

ವಿವೇಚನೆ) (೨) ರಚನಾತ್ಮಕ (ಬಗೆಬಗೆಯ ಸ್ವತಂತ್ರ ಕೃತಿಗಳು) (೩) ಸಂಶೋಧನಾತ್ಮಕ (ಕವಿ, ಕಾಲ, ದೇಶ ಕರ್ತೃತ್ವ, ಕಾವ್ಯಶಕ್ತಿಗಳ ವಿವೇಚನೆ).

ಮಾನವಲ್ಲಿ ರಾಮಕೃಷ್ಣ ಕವಿಗಳು ಹಿಂದಿನ ಕಾವ್ಯಗಳಿಗೆ ಹೊಸದಾಗಿ ಜೀವ ಕೊಟ್ಟರು. ಗುರುಜಾಡ ಶ್ರೀರಾಮಮೂರ್ತಿ, ವೀರೇಶಲಿಂಗಮು ಪಂತುಲು, ವಂಗೂರಿ ಸುಬ್ಬಾರಾವು, ಚಾಗಂಟಿ ಶೇಷಯ್ಯ, ನಿಡದವೋಲು ವೆಂಕಟರಾವು ತೆಲುಗು ಕವಿಗಳ ಚರಿತ್ರೆಗಳನ್ನೂ ಚಿಲುಕೂರಿ ವೀರಭಧ್ರರಾವು "ಆಂಧ್ರುಲ ಚರಿತ್ರ" ಎಂಬ ಗ್ರಂಥವನ್ನೂ, ಕೋಮರ್ರಾಜು ಲಕ್ಷ್ಮಣರಾವು ಅವರು "ತೆಲುಗು ವಿಜ್ಞಾನ ಸರ್ವಸ್ವ"ವನ್ನು (Telugu Encyclopaedia) ಪರವಸ್ತು ಚಿನ್ನಯ ಸೂರಿಗಳು 'ನೀತಿಚಂದ್ರಿಕೆ'ಯನ್ನೂ ರಚಿಸಿದ್ದಾರೆ.

ನಾಟಕ, ವಿಮರ್ಶೆ, ಕಾವ್ಯ, ಕವನಗಳು ಅನೇಕರು ರಚಿಸಿದ್ದಾರೆ. ಅವರಲ್ಲಿ ಧರ್ಮವರಂ ಕೃಷ್ಣಮಾಚಾರ್ಯುಲು, ಗುರುಜಾಡ ಅಪ್ಪಾರಾವು, ವೇದಂ ವೆಂಕಟರಾಯಶಾಸ್ತ್ರಿ, ಶ್ರೀಪಾದ ಕೃಷ್ಣಮೂರ್ತಿಶಾಸ್ತ್ರಿ, ತಿರುಪತಿ ವೆಂಕಟಕವುಲು, ಮುಂತಾದವರು ಪ್ರಸಿದ್ಧರಾದವರು.

ಈಚೆಗೆ ಅಭಿವೃದ್ಧಿಗೊಂಡ ಪತ್ರಿಕಾ ವ್ಯವಸಾಯದಿಂದ ಸಣ್ಣ ಕಥೆ, ಭಾವಗೀತೆಗಳು ಪ್ರಾಬಲ್ಯಕ್ಕೆ ಬರುತ್ತಿವೆ. "ಭಾರತಿ", "ಆಂದ್ರ ಪತ್ರಿಕ", "ಆಂಧ್ರಪ್ರಭ", "ಕಿನ್ನೆರ"ಮೊದಲಾದ ಪತ್ರಿಕೆಗಳು ಇವುಗಳಿಗೆ ಹೇರಳವಾದ ಅವಕಾಶವನ್ನೊದಗಿಸಿಕೊಟ್ಟಿವೆ. ಉತ್ತಮ ಸಣ್ಣ ಕಥೆ ಮತ್ತು ಕಾದಂಬರಿಗಳಿಗೆ ಶ್ರೀಪಾದ ಸುಬ್ರಮಣ್ಯಶಾಸ್ತ್ರಿ, ಚಿಂತಾ ದೀಕ್ಷಿತುಲು, ಮೊಕ್ಕಪಾಟಿ ನರಸಿಂಹಶಾಸ್ತ್ರಿ, ಮು. ನರಸಿಂಹಾರಾವು, ಪಿ. ಪದ್ಮರಾಜು, ನೋರಿ ನರಸಿಂಹ ಶಾಸ್ತ್ರಿ, ವಿಶ್ವನಾಥ, ಸತ್ಯನಾರಾಯಣ, ಅಡವಿ ಬಾಪಿರಾಜು ಮುಂತಾದವರು ಮುಖ್ಯರಾದವರು. ಪ್ರಕೃತಿಯ ವಸ್ತುಗಳನ್ನು ಕುರಿತು ವಾಸ್ತವಿಕ ಸನ್ನಿವೇಶಗಳಿಂದ ಸ್ಫೂರ್ತಿಗೊಂಡು ಕವಿಗಳು ಖಂಡಕಾವ್ಯ,ಭಾವಗೀತೆಗಳನ್ನು ಹೆಚ್ಚಾಗಿ ರಚಿಸುತ್ತಿದ್ದಾರೆ. ಇವರಲ್ಲಿ, ದೇವುಲಪಲ್ಲಿ ಕೃಷ್ಣಶಾಸ್ತ್ರಿ, ಶ್ರೀರಂಗಂಶ್ರೀನಿವಾಸರಾವು, ಶಿವಶಂಕರಶಾಸ್ತ್ರಿ, ರಾಯಪ್ರೋಲು ಸುಬ್ಬರಾವು, ಅಡವಿ ಬಾಪಿರಾಜು, ವೇದುಲ ಸತ್ಯನಾರಾಯಣ, ಜಾಷುಘವ ಹೆಸರುವಾಸಿಯಾದವರು. ಹಳತು ಹೊಸತುಗಳ ಸಮ್ಮಿಳನ .ಮತ್ತು ವೈವಿಧ್ಯತೆಗಳಿಗೆ ಹೆಸರಾದವರಲ್ಲಿ ಗಡಿ

ಯಾರಂ ವೆಂಕಟಶೇಶಕವಿ, ("ಶಿವಭಾರತಮು") ಸರಕಾರದ ಆಸ್ಥಾನ ಕವಿಗಳಾದ ಶ್ರೀಪಾದ ಕೃಷ್ಣಮೂರ್ತಿಶಾಸ್ತ್ರಿ ("ಕೃಷ್ಣಭಾರತಮು") ಮತ್ತು ಮದ್ರಾಸು ಸರ್ಕಾರದ ಆಸ್ಥಾನ ಕವಿಗಳಾಗಿದ್ದ ಕೀ. ಶೇ. ತಿರುಪತಿ ವೆಂಕಟ ಶಾಸ್ತ್ರಿಗಳು ಪ್ರಮುಖರಾದವರು.

ಹೀಗೆ ನಾನಾ ಮುಖವಾಗಿ ಬೆಳೆಯುತ್ತಿರುವ ಸಾಹಿತ್ಯದ ಇತ್ತೋಪ್ಯತಿಶಯ ಅಭಿವೃದ್ಧಿ ಸಾಧನೆ ನವ ಯುವಕರದಾಗಿದೆ. ನವ ಕವಿಗಳು ಆರ್ಷೇಯ ಕಾವ್ಯಬಂಧವನ್ನು ಹರಿದು ಬೇರೆಯೊಂದು ಮಾರ್ಗ ಹಿಡಿಯು ವಂತೆ ತೋರುತ್ತದೆ. ಈ ಹೊಸ ಕ್ರಾಂತಿಯಿಂದ ಮೂಡಿದ ಕಾವ್ಯವು ಕವಿತ್ರಯರ ಹಿರಿಮೆಯನ್ನೂ ಅಷ್ಟದಿಗ್ಗಜಗಳ ಗರಿಮೆಯನ್ನೂ ಪಡೆದು ಆಂಧ್ರ ಸಾಹಿತ್ಯಾಕಾಶದಲ್ಲಿ ತಾರೆಗಳಾಗಿ ಪ್ರಕಾಶಿಸಲಿ.

# ಕವಿಗಳ ಪರಿಚಯ

## ನನ್ನಯಭಟ್ಟು

ವೇದವ್ಯಾಸನು ಸಂಸ್ಕೃತದಲ್ಲಿ ರಚಿಸಿದ್ದ ಭಾರತವನ್ನು ಕವಿತ್ರಯರಾದ—ನನ್ನಯ್ಯಭಟ್ಟು, ತಿಕ್ಕನಸೋಮಯಾಜಿ, ಎಱ್ರಾಪ್ರೆಗ್ಗಡ—ಇವರು ತೆಲುಗಿನಲ್ಲಿ ರಚಿಸಿದರು. ತೆಲುಗು ಸಾಹಿತ್ಯದಲ್ಲಿ ಆದಿಕವಿ ನನ್ನಯಭಟ್ಟು. ೧೧ ನೆಯ ಶತಾಬ್ಧ ಇವನ ಕಾಲ. ರಾಜಮಹೇಂದ್ರಿಯಲ್ಲಿ ಚಾಳುಕ್ಯ ಅರಸನಾದ ರಾಜರಾಜ ನರೇಂದ್ರನ ಆಸ್ಥಾನದಲ್ಲಿದ್ದವನು ಇವನ ಪ್ರೇರಣೆಯಿಂದ, ವೈದಿಕ ಮತವನ್ನು ಹರಡುವುದಕ್ಕೆ ಭಾರತಾಂಧ್ರೀಕರಣವನ್ನು ಕೈಗೊಂಡನು. ಭಾರತದಲ್ಲಿ ಚತುರ್ವೇದ ಸಾರವು ಇರುವುದರಿಂದ ಇದಕ್ಕೆ ಪಂಚಮ ವೇದವೆಂಬ ಹೆಸರು ಬಂದಿದೆ. ಇದನ್ನು ಅನುವಾದಿಸಿ ಜನಸಾಮಾನ್ಯದಲ್ಲಿ ವ್ಯಾಪ್ತಿಗೊಳಿಸಿದರೆ ವೈದಿಕಮತವು ಹರಡಿ ಆ ಕಾಲದಲ್ಲಿ ವಿಜೃಂಭಣೆಯಿಂದ ಬೆಳೆಯುತ್ತಿದ್ದ ಬೌದ್ಧಮತವನ್ನು ಇಕ್ಕಿಮೆಟ್ಟುವುದೆಂಬ ಆಶೆಯಿಂದ ಭಾರತಾಂಧ್ರೀಕರಣವನ್ನು ಬಹಳ ನಿಷ್ಠೆಯಿಂದ ಇವನು ಮಾಡಿದನು.

ಆ ಕಾಲದ ಬೌದ್ಧರು ಜನಸಾಮಾನ್ಯರ ಭಾಷೆಯಾದ ಪ್ರಾಕೃತದಲ್ಲಿ ಅವರ ಪ್ರಚಾರ ವಿಧಾನವನ್ನು ಕೈಗೊಂಡರು. ತೆಲುಗುಭಾಷೆ ಆಗ ಅಷ್ಟು ಬಳಕೆಯಲ್ಲಿರಲಿಲ್ಲ. ಆದ್ದರಿಂದ ನನ್ನಯಭಟ್ಟು ಭಾಷಾಂತರಿಸಿದ ಭಾರತದಲ್ಲಿ ಹೆಚ್ಚಾಗಿ ಸಂಸ್ಕೃತ ಮತ್ತು ತತ್ಸಮ ಪದಗಳನ್ನು ಉಪಯೋಗಿಸಿದ್ದಾನೆ. ಇವನು ಆದಿಪರ್ವ, ಸಭಾಪರ್ವ ಮತ್ತು ಅರಣ್ಯಪರ್ವದಲ್ಲಿ ಅರ್ಧಭಾಗವನ್ನು ಅನುವಾದಮಾಡಿ ದಿವಂಗತನಾದನು. ೧೩ ನೇ ಶತಮಾನದಲ್ಲಿ ತಿಕ್ಕನ ಸೋಮಯಾಜಿ ಕವಿ ವಿರಾಟಪರ್ವದಿಂದ ಹಿಡಿದು ಸ್ವರ್ಗಾರೋಹಣಪರ್ವದವರೆಗೂ ೧೫ ಪರ್ವಗಳನ್ನು ಅನುವಾದಮಾಡಿದನು. ಎಱ್ರಾಪ್ರೆಗ್ಗಡ ಎಂಬ ಕವಿ ೧೪ ನೆಯ ಶತಮಾನದಲ್ಲಿ ಅರಣ್ಯಪರ್ವದ ಶೇಷವನ್ನು ಪೂರೈಸಿದನು.

ಆಂಧ್ರದಲ್ಲಿ ನನ್ನಯಭಟ್ಟನೇ ಆದಿಕವಿ. ಇವನು "ಆಂಧ್ರಶಬ್ದ

ಚಿಂತಾಮಣಿ" ಎಂಬ ಆಂಧ್ರವ್ಯಾಕರಣವನ್ನು ಸಂಸ್ಕೃತ ಭಾಷೆಯಲ್ಲಿ ರಚಿಸಿದ್ದಾನೆ. ಆ ಕಾಲದಲ್ಲಿದ್ದ ಸಂಸ್ಕೃತ ಭಾಷಾ ಪ್ರಾಬಲ್ಯವೇ ಹೀಗೆ ಇವನನ್ನು ಸಂಸ್ಕೃತದಲ್ಲಿ ತೆಲುಗು ವ್ಯಾಕರಣವನ್ನು ರಚಿಸುವುದಕ್ಕೆ ಪ್ರೇರಣೆ ಮಾಡಿರಬೇಕು. ಕನ್ನಡ ಸಾಹಿತ್ಯದಲ್ಲಿಯೂ "ಕರ್ಣಾಟಕ ಭಾಷಾ ಭೂಷಣ" ವನ್ನು ನಾಗವರ್ಮನೂ, "ಶಬ್ದಾನುಶಾಸನ" ವೆಂಬ ಕನ್ನಡ ವ್ಯಾಕರಣವನ್ನು ಭಟ್ಟಾಕಳಂಕನೂ ಸಂಸ್ಕೃತ ಭಾಷೆಯಲ್ಲಿಯೇ ರಚಿಸಿದ್ದಾರೆ.

ಇವನಿಗೆ ಭಾರತ ರಚನೆಯಲ್ಲಿ ಕನ್ನಡ ಕವಿಯಾದ ನಾರಾಯಣ ಭಟ್ಟನು ಸಹಾಯಕನಾಗಿದ್ದನೆಂದು ಗ್ರಂಥಾದಿಯಲ್ಲಿ ನನ್ನಯ್ಯನು ಹೇಳಿ ಕೊಂಡಿದ್ದಾನೆ. ಈ ನಾರಾಯಣಭಟ್ಟನು ಆಹವಮಲ್ಲ ಸೋಮೇಶ್ವರನ ಆಸ್ಥಾನ ಕವಿಯಾಗಿದ್ದು ಕನ್ನಡ ನಾಡಿನಲ್ಲಿ ಭರದಿಂದ ವ್ಯಾಪ್ತಿಗೊಳ್ಳುತ್ತಿದ್ದ ಜೈನಮತವು ಹಿಡಿಸದೆ ಇವನು ವೈದಿಕ ಮತಾವಲಂಬಿಯಾದುದರಿಂದ ಆಂಧ್ರ ದೇಶಕ್ಕೆ ಹೋಗಿರಬೇಕು. ಇವನು ಸಂಸ್ಕೃತ ಕರ್ಣಾಟಕ ಪ್ರಾಕೃತ ಪೈಶಾಚೀ ಭಾಷಾಕವಿ ಶೇಖರನೆಂದು ಪ್ರಸಿದ್ಧಿ ಹೊಂದಿದನಂತೆ. ಭಾರತಾಂಧ್ರೀಕರಣದಲ್ಲಿ ನನ್ನಯ್ಯನಿಗೆ ಸಹಾಯಕನಾಗಿದ್ದನು. ನನ್ನಯ್ಯನಿಗೆ "ವಾಗನುಶಾಸನ" ಎಂಬ ಬಿರುದಿದೆ. ಇವನ ರಚನೆಯಲ್ಲಿ ಮೂರು ಭಾಗಗಳು ಸಂಸ್ಕೃತ ಪದಗಳು ಒಂದು ಭಾಗ ತೆಲುಗು ಪದಗಳು ಸೇರಿವೆ. ಪಂಪ ಭಾರತದ ಶೈಲಿ ನನೆಪಿಗೆ ಬರುತ್ತದೆ. ಒಂದು ಶತಮಾನಕ್ಕೆ ಹಿಂದೆಯೇ ಪ್ರಸಿದ್ಧಿಯನ್ನು ಹೊಂದಿದ್ದ ಪಂಪ ಭಾರತದ ಕೆಲವು ಅನುಕರಣಗಳು ನನ್ನಯ್ಯನ ಭಾರತದಲ್ಲಿ ಕಂಡುಬರುತ್ತವೆ. ಹೀಗೆ ಬರುವುದಕ್ಕೆ ನಾರಾಯಣಭಟ್ಟನ ಸಹಾಯವೇ ಕಾರಣ ವಿರಬೇಕು. ಕನ್ನಡ ಕವಿಯಾದಂತಹ ಇವನ ಸಹಾಯವನ್ನು ಚೆನ್ನಾಗಿ ನನ್ನಯ್ಯನ್ನು ಹೊಗಳಿದ್ದಾನೆ. ಭಾರತ ಘೋರ ರಣದಲ್ಲಿ ನಾರಾಯಣನು ಅರ್ಜುನನಿಗೆ ಹೇಗೆ ಸಹಾಯ ಮಾಡಿದ್ದಾನೆಯೋ ಅಂತಹ ಸಹಾಯ ವನ್ನು ತನಗೆ ನಾರಾಯಣಭಟ್ಟನು ಮಾಡಿದ್ದಾನೆಂದು ಹೇಳಿಕೊಂಡಿದ್ದಾನೆ. ಈ ಅನುಕರಣಗಳ ಸ್ವರೂಪವನ್ನು ಕನ್ನಡ ತೆಲುಗು ಭಾಷೆಗಳನ್ನು ಚೆನ್ನಾಗಿ ಅರಿತಿರುವವರು ಪರಿಶೋಧನೆ ಮಾಡಬೇಕು.

# ಪಾಲ್ಕುರಿಕಿ ಸೋಮನಾಥ ಕವಿ

ಕರ್ಣಾಟಕ ಆಂಧ್ರ ಸಾಹಿತ್ಯಗಳಲ್ಲಿ ವೀರಶೈವ ಸಾಹಿತ್ಯಕ್ಕೆ ತಳಹದಿಯನ್ನು ಹಾಕಿದ ಪಾಲ್ಕುರಿಕಿ ಸೋಮನಾಥನು ಮೈಸೂರಿನವನೆಂದು ಆಧಾರಗಳಿಂದ ಹೇಳಬಹುದು. ಕ್ರಿ. ಶ. ೧೧೯೦ ರಲ್ಲಿದ್ದ ಈತನು ಆಂಧ್ರದೇಶದಲ್ಲಿ ಇದ್ದುಕೊಂಡು ಬಸವೇಶ್ವರನ ಚರಿತ್ರೆಯನ್ನು ದ್ವಿಪದಿ ಕಾವ್ಯದಲ್ಲಿ "ಬಸವಪುರಾಣ" ಎಂಬ ಹೆಸರಿಟ್ಟು ಬರೆದಿದ್ದಾನೆ. ಇವನ ಬಸವಪುರಾಣ, ಪಂಡಿತಾರಾಧ್ಯ ಚರಿತ್ರೆ, ವೃಷಾಧಿಪ ಶತಕ ಕರ್ಣಾಟಕ ದೇಶದಲ್ಲಿಯೂ ಹೆಚ್ಚು ವ್ಯಾಪ್ತಿಗೊಂಡಿವೆ. ಭೀಮಕವಿ ಕನ್ನಡದಲ್ಲಿ 'ಬಸವ ಪುರಾಣ'ವನ್ನು ಷಟ್ಪದೀವೃತ್ತದಲ್ಲಿ ಅನುವಾದ ಮಾಡಿದ್ದಾನೆ.

ಸೋಮನಾಥನು ಸಂಸ್ಕೃತಾಂಧ್ರ ಕನ್ನಡ ಭಾಷೆಗಳಲ್ಲಿ ಗ್ರಂಥಗಳನ್ನು ಬರೆದಿದ್ದಾನೆ. "ಶರಣು ಬಸವ ರಗಳೆ"ಯನ್ನು ಕುರಿತು ಕರ್ಣಾಟ ಕವಿ ಚರಿತೆಯಲ್ಲಿ ಈ ರೀತಿ ಇದೆ : "ಇದರಲ್ಲಿ ೧೦೮ ಕಂದಗಳಿವೆ. ಪ್ರತಿ ಕಂದವೂ ಶರಣು ಬಸವ ಎಂದು ಮುಗಿಯುತ್ತದೆ."* ಇದಲ್ಲದೆ ಸದ್ಗುರು ರಗಳೆ, ಬಸವಾಢ್ಯರಗಳೆ, ಪಂಚಪ್ರಕಾರ ಗದ್ಯ, ನಮಸ್ಕಾರ ಗದ್ಯ, ಅಕ್ಷರಾಂಕಗದ್ಯ ಮುಂತಾದುವು ಇವನ ಕನ್ನಡ ಗ್ರಂಥಗಳು. ಸೋಮೇಶ್ವರ ಶತಕವನ್ನೂ ಕನ್ನಡದಲ್ಲಿ ಇವನೇ ರಚಿಸಿರಬಹುದೆಂದು ಅದರ ಪೀಠಿಕೆಯಿಂದ ಗೊತ್ತಾಗುತ್ತದೆ.

ಸೋಮನಾಥನು ತುಮಕೂರು ಜಿಲ್ಲೆಯ ತಿಪಟೂರು ತಾಲ್ಲೂಕಿನ ಹಾಲ್ಕುರಿಕೆ ಗ್ರಾಮದವನು. "ಕುರಿಕಿ" ಅಥವಾ "ಗುರಿಕೆ" ಅನ್ನುವ ಪದಗಳು ಕನ್ನಡದಲ್ಲಿ ಗ್ರಾಮಶಬ್ದ ಪರ್ಯಾಯ ಪದಗಳು. ತೆಲುಗಿನಲ್ಲಿ ಇವುಗಳಿಗೆ "ಕುರ್ತಿ" ಎನ್ನುತ್ತಾರೆ. ಕುರಿಕಿ ಅಥವಾ ಕುರ್ಕಿ ಅನ್ನುವ ಪದ ಕನ್ನಡ ದೇಶದಲ್ಲಿಯೇ ಹೆಚ್ಚಾಗಿ ಇದೆ. ಕೋಲಾರು ಜಿಲ್ಲೆಯ ಕುಂದಲಕುರ್ಕಿ ಗ್ರಾಮದಲ್ಲಿದ್ದ ಚಂದ್ರಕವಿ ಎಂಬ ತೆಲುಗು ಕವಿ "ಶ್ರೀ ಕೃಷ್ಣಭೂಪಾಲೀಯಮು" ಎಂಬ ತೆಲುಗು ಗ್ರಂಥವನ್ನು ರಚಿಸಿ ಶ್ರೀ ನುಮ್ಮಡಿ ಕೃಷ್ಣ

---

* ಕರ್ಣಾಟಕ ಕವಿಚರಿತೆ Vol I ಪುಟ 233

ರಾಜೇಂದ್ರ ಒಡೆಯರ್‌ರವರಿಗೆ ಅರ್ಪಣೆಮಾಡಿದ್ದಾನೆ (೧೭೫೧) * ಸೋಮನಾಥನು ಗೋದಾವರಿ ಜಿಲೆಯ ಪಾಲ್ಕುರಿಕಿ ಗ್ರಾಮದಲ್ಲಿ ಹುಟ್ಟಿದವನೆಂದು ಕರ್ಣಾಟಕ ಕವಿಚರಿತ್ರೆಗಳಲ್ಲಿ ಬರೆದಿದ್ದಾರೆ. ಆದರೆ ಇಂತಹ ಗ್ರಾಮವು ಗೋದಾವರಿ ಜಿಲ್ಲೆಯಲ್ಲಿಲ್ಲ. ಕೆಲವರು ಹೈದರಾಬಾದಿನ ತೆಲಂಗಾಣದ ದಲ್ಲಿದೆ ಎಂದರು. ಅಲ್ಲಿ ಜನಗಾಮ ಪಟ್ಟಣಕ್ಕೆ ಹತ್ತಿರ ಪಾಲ 'ಕುರ್ತಿ' ಎಂಬ ಗ್ರಾಮವಿದೆ, ಆದರೆ ಅದು "ಕುರ್ಕಿ" ಅಲ್ಲ ಸೋಮನಾಥನ ಕಾಲದ ಪಾಲ್ಕುರಿಕಿ ಈಗ ಹಾಲ್ಕುರಿಕಿ ಆಗಿದೆ. ಕನ್ನಡದಲ್ಲಿ ಪಕಾರಾದಿ ಪದಗಳು ಅನೇಕವು ಹಕಾರವಾಗಿ ಕಾಲಕ್ರಮದಿಂದ ಪರಿಣಾಮವನ್ನು ಹೊಂದಿವೆ. ಉದಾ: ಪಗಲು–ಹಗಲು, ಪತ್ತಿ–ಹತ್ತಿ, ಪುಲಿ–ಹುಲಿ, ಪಕ್ಕಿ–ಹಕ್ಕಿ, ಪುಟ್ಟು–ಹುಟ್ಟು, ಪಾಡು–ಹಾಡು, ಪೂಉ–ಹೂ, ಪಾಲು–ಹಾಲು.

ಸೋಮನಾಥನು ತೆಲುಗಿನಲ್ಲಿ ಮಹಾಕವಿ. ಆಂಧ್ರ ಕರ್ಣಾಟಕರಿಬ್ಬರೂ ಇವನನ್ನು ದೊಡ್ಡ ಕವಿಯನ್ನಾಗಿಯೂ ಮತಾಚಾರ್ಯರನ್ನಾಗಿಯೂ ಗೌರವಿಸುತ್ತಾರೆ. ಇವನು ಕರ್ಣಾಟಕದವನು ಎನ್ನುವುದಕ್ಕೆ ಇವನನ್ನು ಕುರಿತು ಈ ಕೆಳಕಂಡ ಕನ್ನಡ ಕವಿಗಳು ತಮ್ಮ ಗ್ರಂಥಗಳ ಆದಿಯಲ್ಲಿ ಪ್ರಶಂಸೆಮಾಡಿರುವುದೇ ಸಾಕ್ಷಿ.

೧. ಪದ್ಮಣಾಂಕ (ಕ್ರಿ. ಶ. ೧೩೭೫) ಪದ್ಮರಾಜಪುರಾಣ
೨. ಬೊಮ್ಮರಸ (೧೫೦೦ ಸೌಂದರಪುರಾಣ)
೩. ಚತುರ್ಮುಖ ಬೊಮ್ಮರಸ (೧೫೦೦) ರೇವಣ ಸಿದ್ಧೇಶ್ವರ ಪುರಾಣ
೪. ಗುಬ್ಬಿ ಮಲ್ಲಣಾರ್ಯ (೧೫೧೫) ಭಾವಚಿಂತಾರತ್ನಾಕರ ಮತ್ತು ವೀರಶೈವಾಮೃತ ಪುರಾಣ
೫. ಕುಮಾರ ಚನ್ನಬಸವ (೧೫೫೦) ಬಸವಪುರಾಣದ ಪುರಾತನ ಚರಿತೆ
೬. ಕಿಕ್ಕೇರಿ ಆರಾಧ್ಯ ನಂಜುಂಡಯ್ಯ (೧೫೫೦) ಭೈರವೇಶ್ವರ ಕಾವ್ಯ
೭. ಸದಾಶಿವಯೋಗಿ (೧೫೫೪) ರಾಮನಾಥ ವಿಲಾಸ

* ಅಚ್ಚಾಗಿದೆ. ಮೈಸೂರು ಓರಿಯಂಟಲ್ ಲೈಬ್ರರಿಯಲ್ಲಿ ಪ್ರತಿಗಳು ಸಿಗುತ್ತವೆ.

೮. ಕಾಂತೇಶಯ್ಯ (೧೫೬೧) ತೋಂಟದ ಸಿದ್ಧೇಶ್ವರಪುರಾಣ
೯. ವಿರೂಪಾಕ್ಷಪಂಡಿತ (೧೫೮೪) ಚನ್ನಬಸವ ಪುರಾಣ
೧೦. ಮಲ್ಲಿಕಾರ್ಜುನ ಕವಿ (೧೬೦೦) ಸಹಸ್ರಗಣ ಮಾಲಿಕೆ
೧೧. ಸಂಗನ ಬಸವೇಶ್ವರ (೧೬೦೦) ರಘೋದ್ಧರಣೆ ವಾಚ್ಯ
೧೨. ಬಸವಲಿಂಗ ಕವಿ (೧೬೦೦) ಶಿವಾಧಿಕ್ಯಪುರಾಣ
೧೩. ಹರೀಶ್ವರ (೧೬೦೦) ಪ್ರಭುದೇವ ಚರಿತ್ರೆ
೧೪. ಸಿದ್ಧನಂಜೇಶಕವಿ (೧೬೫೦) ಗುರುರಾಜ ಚರಿತ್ರೆ
೧೫. ವೀರಣಾರ್ಯ (೧೬೫೦) ಪ್ರಸಾದ ಚರಿತ್ರೆ
೧೬. ಶಾಂತವೀರದೇಶಿಕ (೧೬೫೦) ಶಿವಲಿಂಗಚರಿತ್ರೆ
೧೭. ಬಸವಲಿಂಗಕವಿ (೧೬೭೯) ಕೊಟ್ಟೂರು ಬಸವೇಶ್ವರ ಪುರಾಣ
೧೮. ಸಂಪಾದನೆಯ ಪರ್ವತೇಶ್ವರ (೧೬೯೬) ಚತುರಾಚಾರ್ಯ ಪುರಾಣ

೧೯. ಚನ್ನಮಲ್ಲೇಶಕವಿ (೧೭೦೦) ದೀಪದ ಕಲಿಯಾರು ಚರಿತ್ರೆ. ಇಷ್ಟು ಜನ ಕನ್ನಡ ಕವಿಗಳು ಪ್ರಶಂಸೆ ಮಾಡಿರುವ ಸೋಮನಾಥನು ಕನ್ನಡದವನೇ ಹೊರತು ಬೇರೆಯವನಲ್ಲ.

ಇವನು ರಚಿಸಿರುವ ಪಂಡಿತಾರಾಧ್ಯಚರಿತ್ರೆಯಿಂದ ಗುರುಭಕ್ತಿ ಯಾಂಡಾರು ಚರಿತ್ರೆಯನ್ನು ಕನ್ನಡಿಸಿದ ೧೬೫೦ ರಲ್ಲಿದ್ದ ಕನ್ನಡ ಕವಿ ಯಾದ ಪ್ರಾಸಭೂಷಣ ಪೆಮ್ಮಿಶೆಟ್ಟಿ ಎಂಬುವನು ಈ ರೀತಿ ಬರೆದಿದ್ದಾನೆ:

"ಪಾಲ್ಕುರಿಕೆ ಸೋಮನಾಥನು ತಂದೆ ಭಾಷೆಯಲ್ಲಿ ರಚಿಸಿದ ಆರಾಧ್ಯ ಚರಿತ್ರೆಯಿಂದ ಗುರುಭಕ್ತಿಯಾಂಡಾರು ಚರಿತ್ರೆಯುಂಕಂನಡಿಸಿ"— ಈ ರೀತಿ ಮೂರು ಓಲೆಯಗರಿ ಪ್ರತಿಗಳಲ್ಲಿದೆ. ಇವು ಮೈಸೂರು ಓರಿ ಯಂಟಲ್ ಲೈಬ್ರರಿಯಲ್ಲಿವೆ. ಇನ್ನೂ ಅಚ್ಚಾಗಿಲ್ಲ ಇದರಿಂದ ಗೊತ್ತಾಗು ವುದೇನೆಂದರೆ ಇವನ ತಂದೆ ಭಾಷೆ ತೆಲುಗು, ಆದರೆ ತಾಯಿಭಾಷೆ (ಮಾತೃ ಭಾಷೆ) ಕನ್ನಡವಿರಬೇಕೆಂದು ಸ್ಪಷ್ಟವಾಗುತ್ತದೆ.

ಇವನಿಗೆ ತನ್ನ ಜನ್ಮಭೂಮಿಯ ಮೇಲೆ ಇರುವ ಮಮತೆಯನ್ನು ತೋರಿಸುವುದಕ್ಕೆ ಇನ್ನೊಂದು ಉದಾಹರಣೆ ಇದೆ ಇವನಿಗೆ ಅವಸಾನ ಕಾಲದಲ್ಲಿ ತನ್ನ ದೇಶಕ್ಕೆ ಬಂದು ನಿರ್ಯಾಣ ಹೊಂದಬೇಕೆನ್ನಿಸಿತು. ಆದ್ದ

ರಿಂದ ಆಂಧ್ರದೇಶವನ್ನು ಬಿಟ್ಟು ಬೆಂಗಳೂರು ಜಿಲ್ಲೆಯ ಮಾಗಡಿ ಹತ್ತಿರ ದಲ್ಲಿರುವ ಕಲ್ಯ ಎಂಬ ಗ್ರಾಮಕ್ಕೆ ಬಂದು ಶಿವೈಕ್ಯವನ್ನು ಹೊಂದಿದ್ದಾನೆ. ಈ ಗ್ರಾಮಕ್ಕೆ ತಾರಕಾದ್ರಿ ಎಂದು ನಾಮಾಂತರವಿದೆ ಎನ್ನುತ್ತಾರೆ. ಈ ಗ್ರಾಮದಲ್ಲಿ ವೀರಶೈವರ ಪಂಚಾಚಾರ್ಯ ಸಿಂಹಾಸನಗಳಲ್ಲಿ ನಾಲ್ಕನೆಯ ದಾದ ಶ್ರೀಶೈಲ ಸಿಂಹಾಸನಕ್ಕೆ ಸೇರಿದ ಒಂದು ಮಠವಿದೆ. ಇಲ್ಲಿ ಪಾಲ್ಕುರಿಕಿ ಸೋಮನಾಥನ ಸಮಾಧಿಯು ಇದೆ.

ಮೇಲೆ ಹೇಳಿರುವ ವಿಷಯಗಳಿಂದ ತಿಳಿಯುವದೇನೆಂದರೆ, ಸೋಮ ನಾಥನು ತುಮಕೂರು ಜಿಲ್ಲೆಯಲ್ಲಿ ತೆಲುಗು ಕನ್ನಡ ದೇಶಗಳ ಎಲೆಯ ಸಮೀಪದಲ್ಲಿರುವ ಹಾಲುಕುರಿಕೆ (ಕುರ್ಕಿ) ಗ್ರಾಮದಲ್ಲಿ ಜನಿಸಿದೆವನೆಂದೂ ಚಿಕ್ಕವಯಸ್ಸಿನಲ್ಲಿಯೇ ಇವನು ಆಂಧ್ರದ ಶ್ರೀಶೈಲ ಪ್ರಾಂತಕ್ಕೆ ಹೋದ ನೆಂದೂ, ಸಿದ್ಧಿಯನ್ನು ಹೊಂದುವ ವೇಳೆಗೆ ತಿರುಗಿ ತನ್ನ ಸ್ವದೇಶಕ್ಕೆ ಬಂದ ನೆಂದೂ ನಿರ್ಣಯ ಮಾಡಬಹುದು.

ಇವನು ಕವಿತ್ರಯರು ಅನುಸರಿಸಿದ್ದ ಮಾರ್ಗಕವಿತೆಯನ್ನು ಬಿಟ್ಟು ದೇಶಿಕವಿತೆಯಾದ ದ್ವಿಪದಿಯಲ್ಲಿ ತನ್ನ ಕೃತಿಗಳನ್ನು ರಚಿಸಿದ್ದಾನೆ. ಜನ ಸಾಮಾನ್ಯರಲ್ಲಿ ಸುಲಭವಾಗಿ ಅರ್ಥವಾಗುವ ಶೈಲಿ ದೇಶಿರಚನೆ. ಮತ ಪ್ರಚಾರದ ಉದ್ದೇಶವೇ ಇವನನ್ನು ಈ ರೀತಿ ರಚನೆ ಮಾಡುವುದಕ್ಕೆ ಪ್ರೋತ್ಸಾಹ ಮಾಡಿರಬಹುದು. ತೆಲುಗು ಸಾಹಿತ್ಯದಲ್ಲಿ ಶತಕ ಸಾಹಿತ್ಯಕ್ಕೆ ಇವನೇ ಮಾರ್ಗದರ್ಶಿ. ವೃಷಾಧಿಪಶತಕ ಇವನ ಕೃತಿ.

## ತಿಕ್ಕನ ಸೋಮಯಾಜಿ

ಆಂಧ್ರ ಕವಿತ್ರಯರಲ್ಲಿ ಎರಡನೆಯವನು. ೧೩ನೆಯ ಶತಮಾನದಲ್ಲಿ ನೆಲ್ಲೂರನ್ನು ಆಳುತ್ತಿದ್ದ ಮನುಮಸಿದ್ಧಿ ಎಂಬ ಅರಸನ ಆಸ್ಥಾನಕವಿ. ಇವನು ವಿರಾಟಪರ್ವದಿಂದ ಹಿಡಿದು ಸ್ವರ್ಗಾರೋಹಣದಪರ್ವದವರೆಗೂ ರಚಿಸಿದ್ದಾನೆ ಭಾರತಾಂಧ್ರೀಕರಣವು ಚಂಪೂಕಾವ್ಯ. ವಚನವೇ ಇಲ್ಲದ "ನಿರ್ವಚ ನೋತ್ತರ ರಾಮಾಯಣ" ವೆಂಬ ಪದ್ಯಕಾವ್ಯವನ್ನು ರಚಿಸಿ ಮನುಮ

ಸಿದ್ಧಿಗೆ ಅಂಕಿತ ಮಾಡಿದ್ದಾನೆ. ಯಜ್ಞವನ್ನು ಮಾಡಿದನಂತರ ಇವನಿಗೆ ಸೋಮಯಾಜಿ ಎಂಬ ಹೆಸರು ಬಂದಿದೆ. ಇವನು ಕೇವಲ ಆಸ್ಥಾನಕವಿ ಮಾತ್ರ ವಲ್ಲದೆ ಮಂತ್ರಿಯಾಗಿಯೂ ಇದ್ದು ಸಾಮಂತ ಅರಸನಾಗಿದ್ದ ಮನುಮ ಸಿದ್ಧಿಗೆ ರಾಜ್ಯಾಡಳಿತದಲ್ಲಿ ಬಲಗೈಯಾಗಿದ್ದನಂತೆ. ರಾಜ್ಯಾಂಗದಲ್ಲಿಯೂ ರಾಜಕೀಯ ವ್ಯವಹಾರಗಳಲ್ಲಿಯೂ ಧುರೀಣ. ಆವನು ಆಂಧ್ರೀಕರಿಸಿರುವ ಉದ್ಯೋಗಪರ್ವದಲ್ಲಿ ಈ ಚಾತುರ್ಯವನ್ನು ತೋರಿಸಿದ್ದಾನೆ.

ಇವನ ರಚನೆಯಲ್ಲಿ ಸಂಸ್ಕೃತ ತತ್ಸಮ ಪದಗಳು ಕಡಿಮೆ. ಹೇರಳ ವಾಗಿ ತೆಲುಗು ಪದಗಳನ್ನು ಉಪಯೋಗಿಸಿದ್ದಾನೆ. ೧೩ನೆಯ ಶತಮಾನಕ್ಕೆ ತೆಲುಗು ಭಾಷೆಯ ವ್ಯಾಪ್ತಿಯು ಹೆಚ್ಚಾಯಿತೆಂದು ಇದರಿಂದ ಗೊತ್ತಾಗು ವುದು. ಇವನಿಗೆ "ಉಭಯಕವಿ ಮಿತ್ರ", "ಕವಿಬ್ರಹ್ಮ" ಎಂಬ ಬಿರದು ಗಳಿವೆ. ಅಲ್ಪಾಕ್ಷರಗಳಲ್ಲಿ ಅನಲ್ಪನಾರ್ಥರಚನೆ ಮಾಡುವುದರಲ್ಲಿ ಇವನು ಅದ್ವಿತೀಯನು. ಪಾತ್ರಗಳ ಮನಸ್ತತ್ವಗಳನ್ನು ಚಿತ್ರೀಕರಿಸುವುದರಲ್ಲಿಯೂ ಸಹಜ ಸಂಭಾಷಣಾ ಶೈಲಿಯಲ್ಲಿ ರಚನೆ ಮಾಡುವುದರಲ್ಲಿಯೂ ಸನ್ನಿವೇಶ ಗಳನ್ನು ಅತಿ ಸ್ವಾಭಾವಿಕವಾಗಿ ರಚಿಸಿರುವುದರಲ್ಲಿಯೂ ಜಾತೀಯ ಪದ ಪ್ರಯೋಗಗಳನ್ನು ಮಾಡುವುದರಲ್ಲಿಯೂ ಇವನಿಗೆ ಸಮಾನರಾಗಿರುವ ಆಂಧ್ರಕವಿ ಯಾರೂ ಇಲ್ಲ ಎನ್ನಬಹುದು. ಕನ್ನಡ ಸಾಹಿತ್ಯದಲ್ಲಿ ಇವ ನನ್ನು ರನ್ನನಿಗೆ ಹೋಲಿಸಬಹುದು.

## ಎಱ್ಱಾಪ್ರೆಗ್ಗಡ

ಆಂಧ್ರ ಕವಿತ್ರಯರಲ್ಲಿ ಮೂರನೆಯವನು. ಮಹಾಭಾರತದ ಅರಣ್ಯ ಪರ್ವ ಶೇಷವನ್ನು ಮಾತ್ರ ಪೂರೈಸಿದರೂ ಇವನಿಗೆ ತೆಲುಗು ಸಾಹಿತ್ಯದಲ್ಲಿ ಇನ್ನಿಬ್ಬರಿಗೆ ಇರುವಷ್ಟು ಸ್ಥಾನಮಾನಗಳುಂಟು. ಇವನ ಇತರ ಕೃತಿಗಳು "ಹರಿವಂಶ" ಮತ್ತು "ನೃಸಿಂಹ ಪುರಾಣ". ಇವನಿಗೆ ಪ್ರಬಂಧ ಪರಮೇ ಶ್ವರನೆಂದು ಬಿರುದಿದೆ. ಇವನ ಕಾವ್ಯರಚನಾರೀತಿ ಮುಂಬರುವ ಕೃಷ್ಣ ದೇವರಾಯನ ಯುಗಕ್ಕೆ ಮಾರ್ಗದರ್ಶಕವಾಯಿತು.

# ಶ್ರೀನಾಥ

ಶ್ರೀನಾಥನು ತನ್ನ ಸಮಕಾಲೀನರಾದ ತೆಲುಗು ಕವಿಗಳನ್ನೆಲ್ಲ ಮೀರಿಸಿದ ಮಹಾಕವಿ. ಕವಿತ್ರಯರಾದ ನನ್ನಯ್ಯ, ತಿಕ್ಕನ ಸೋಮಯಾಜಿ, ಎಱ್ರಾಪ್ರೆಗ್ಗಡರಿಗೆ ಸಮಜೋಡಿ. ಇವನ ಕಾಲ ಕ್ರಿ. ಶ. ೧೩೬೫–೧೪೫೦. ತೆಲುಗು ಸಂಸ್ಕೃತಗಳೆರಡರಲ್ಲಿಯೂ ಈತನಿಗೆ ಅಸಾಧಾರಣವಾದ ಪಾಂಡಿತ್ಯ, ಆದ್ದರಿಂದಲೇ ಈತನು ವಿದ್ವದೌಷಧವೆನಿಸಿದ ನೈಷಧವನ್ನೂ ಉಕ್ಕಿನ ಉಂಡೆಗೆ ಹೋಲಿಸಲ್ಪಟ್ಟಿರುವ ಕಾಶೀಖಂಡವನ್ನೂ ಸುಲಭವಾಗಿ ತೆಲುಗಿಸಿ ಕವಿಸಾರ್ವಭೌಮನೆನಿಸಿಕೊಂಡನು. ಇವಲ್ಲದೆ ಇವನು ದ್ವಿಪದಿಯಲ್ಲಿ ಪಲ್ನಾಟಿವೀರ ಚರಿತ್ರ, ಚಂಪೂಕಾವ್ಯಗಳಾಗಿ ಹರವಿಲಾಸವು, ಶಿವರಾತ್ರಿ ಮಹಾತ್ಮ್ಯಮು, ಭೀಮಖಂಡಮು, ಕಾಶೀಖಂಡಮು ಮುಂತಾದ ಕಾವ್ಯಗಳನ್ನು ರಚಿಸಿದ್ದಾನೆ.

ದೇಶಾಟನೆ ಮಾಡಿ ತನ್ನ ಕೀರ್ತಿಯನ್ನೂ ಸಾರಿದ್ದಾನೆ. ವಿಜಯನಗರದ ಪ್ರೌಢದೇವರಾಯನ ಆಸ್ಥಾನದಲ್ಲಿದ್ದ ಡಿಂಡಿಮಭಟ್ಟನನ್ನು ಸೋಲಿಸಿ ಪ್ರೌಢದೇವರಾಯನಿಂದ ಮುತ್ತುಗಳ ಮಂಟಪದಲ್ಲಿ ಕನಕಾಭಿಷೇಕವನ್ನು ಮಾಡಿಸಿಕೊಂಡನು, ಭೋಗೈಕ ಲಾಲಸನಾಗಿ, ರಸಿಕನಾಗಿ, ಶ್ರೀಮಂತನಾಗಿ, ರಾಜಸನ್ಮಾನಿತನಾಗಿ ಬದುಕಿದ ಇವನಿಗೂ ಅವಸಾನ ಕಾಲದಲ್ಲಿ ಕಷ್ಟಗಳು ತಪ್ಪಲಿಲ್ಲ. ಇವನೇ.ಚಾಟುಪದ್ಯಗಳನ್ನು ಹೇರಳವಾಗಿ ಹೇಳಿ ಅವುಗಳ ಪ್ರಶಸ್ತಿಯನ್ನು ಸಾರಿದನು. ಪೋತನ ಕವಿ ಇವನ ಸಮಕಾಲೀಕನು ಮತ್ತು ಬಾವಮೈದುನನು.

# ಪೋತನ ಕವಿ

ಆಂಧ್ರ ಸಾಹಿತ್ಯದಲ್ಲಿ ಪೋತನಕವಿ ರಚಿಸಿದ ಭಾಗವತಕ್ಕೆ ಒಳ್ಳೆಯ ಖ್ಯಾತಿ ಇದೆ. ಆಂಧ್ರದಲ್ಲಿ ರಾಮಾಯಣ ಭಾರತಗಳಿಗಿಂತಲೂ ಭಾಗವತವೇ ಹೆಚ್ಚು ವ್ಯಾಪ್ತಿಯನ್ನು ಹೊಂದಿದೆ. ಕಾರಣವೆಂದರೆ ಇದರಲ್ಲಿರುವ ಮೂರು ಮುಖ್ಯ ಲಕ್ಷಣಗಳು. ೧. ಭಕ್ತಿ ಸಂಪತ್ತು ೨. ವೇದಾಂತ ವಿವರಣೆ

೩ ರಸವತ್ಕವಿತೆ. ಈ ಮೂರು ಲಕ್ಷಣಗಳಲ್ಲಿ ಭಕ್ತಿಲಕ್ಷಣವೇ ಪೋತನನ ಕವಿತ್ವಕ್ಕೆ ಜೀವಾಧಾರ. ಭಾಗವತದಲ್ಲಿರುವ ಪ್ರಹ್ಲಾದಚರಿತೆ, ಗಜೇಂದ್ರ ಮೋಕ್ಷ, ವಾಮನಚರಿತ್ರೆ ಮುಂತಾದ ಕಥೆಗಳಲ್ಲಿ ಈ ಅಂಶಕ್ಕೆ ಪೋತನನು ಹೆಚ್ಚು ಗಮನ ಕೊಟ್ಟಿದ್ದಾನೆ. ಸಂಸ್ಕೃತ ಭಾಗವತದಲ್ಲಿ ಇಲ್ಲದೇ ಇರುವ ಸನ್ನಿವೇಶಗಳನ್ನೂ ವರ್ಣನೆಗಳನ್ನೂ ತೆಲುಗು ಭಾಗವತದಲ್ಲಿ ಸೇರಿಸಿ ಮೂಲ ಗ್ರಂಥಕ್ಕಿಂತಲೂ ಹೆಚ್ಚು ಬೆಳೆಸಿದ್ದಾನೆ.

ಇವನ ಕಾಲ ೧೫ ನೆಯ ಶತಮಾನ. ಶ್ರೀನಾಥನು ಇವನ ಕಾಲದವನು. ಇವರಿಬ್ಬರಲ್ಲಿ ಪೋತನನು ಭಕ್ತಿಕವಿ ಶ್ರೀನಾಥನು ಭೋಗಕವಿ. ಒಬ್ಬನಿಗೆ ಕಾವ್ಯವನ್ನು ಬರೆದು ದೇವರಿಗೆ ಅರ್ಪಣೆ ಮಾಡಿದರೆ ಸಂಸಾರ ಬಂಧವು ವಿಚ್ಛೇದವಾಗಿ ಮೋಕ್ಷವು ದೊರಕುತ್ತದೆ ಎಂದು ಅಭಿಪ್ರಾಯ. ಇನ್ನೊಬ್ಬರಿಗೆ ಕಾವ್ಯಗಳನ್ನು ಅರಸರಿಗೆ ಅಂಕಿತಮಾಡಿದರೆ ಅವರು ಬೇಕಾದಷ್ಟು ಭೋಗ ಭಾಗ್ಯಗಳನ್ನು ಕೊಟ್ಟು ಸುಖಜೀವನಕ್ಕೆ ಮಾರ್ಗ ಮಾಡುತ್ತಾರೆ ಎಂದು ಅಭಿಪ್ರಾಯ. ಪೋತನನು ಯೋಗಮಾರ್ಗವನ್ನನುಸರಿಸಿ ನೇಗಿಲನ್ನು ಹಿಡಿದು ಉತ್ತು ತನ್ನ ಜೀವನ ಮಾಡಿಕೊಳ್ಳುತ್ತಾನೆ. ಶ್ರೀನಾಥನು ರಾಜಾಸ್ಥಾನಗಳಲ್ಲಿ ಸಂಚರಿಸಿ ಮೃಷ್ಟಾನ್ನವನ್ನುಂಡು ಹಂಸ ತೂಲಿಕಾತಲ್ಪಗಳಲ್ಲಿ ಪವಡಿಸಿ ರಸಿಕಜೀವನವನ್ನು ನಡೆಸುತ್ತಾನೆ. ಅರಸರಿಗೆ ಕಾವ್ಯವನ್ನು ಅಂಕಿತ ಮಾಡಿದರೆ ಅದು ಕನ್ಯಾವಿಕ್ರಯ ಸಮಾನವೆಂದು ಪೋತನ ಭಾವಿಸಿದನು.

ಇವನ ನಿವಾಸಸ್ಥಾನವು ರಾಯಲಸೀಮೆಯ ಕಡಪ ಜಿಲ್ಲೆಯಲ್ಲಿರುವ ಒಂಟಿಮಿಟ್ಟ ಎಂಬ ಗ್ರಾಮ. ಇದಕ್ಕೆ ಏಕಶಿಲಾನಗರವೆಂದು ನಾಮಾಂತರವಿದೆ. ಹೈದರಾಬಾದಿನಲ್ಲಿರುವ ಓರಂಗಲ್ಲು "ಏಕಶಿಲಾನಗರ"ವೆಂದು ಕೆಲವರ ಅಭಿಪ್ರಾಯ. ಆಂಧ್ರಸಾಹಿತ್ಯದಲ್ಲಿ ಈ ಶತಕವನ್ನು ಪೋತನ–ಶ್ರೀನಾಥ ಯುಗವೆಂದು ಕರೆಯುತ್ತಾರೆ. ಪೋತನನು ಗುರುವಿನ ಹತ್ತಿರ ವ್ಯಾಸಂಗ ಮಾಡಿಲ್ಲ. ಇವನದು ಸಹಜಪಾಂಡಿತ್ಯ. ಶ್ರೀರಾಮನಿಂದ ಇವನಿಗೆ ಪ್ರೇರಣೆಯಾಗಿ ಭಾಗವತವನ್ನು ಅನುವಾದ ಮಾಡಿದ್ದಾನೆ. ಭೋಗಿನೀದಂಡಕ, ವಿಜಯಸೇನವೆಂಬ ಗ್ರಂಥಗಳನ್ನು ಬರೆದನಂತೆ. ಅವು ಈಗ ಸಿಗುತ್ತಿಲ್ಲ.

 

ಪ್ರಬಂಧ ಯುಗದ ಕವಿಗಳು

# ಅಲ್ಲಸಾನಿ ಪೆದ್ದನ

ತೆಲುಗು ಸಾಹಿತ್ಯದಲ್ಲಿ ೧೬ ನೇ ಶತಮಾನ ಅಥವಾ ಶ್ರೀ ಕೃಷ್ಣದೇವ ರಾಯನ ಯುಗವನ್ನು ಸ್ವರ್ಣಯುಗವೆಂದು ಕರೆಯುತ್ತಾರೆ. ಕೃಷ್ಣದೇವ ರಾಯನ ಆಸ್ಥಾನದಲ್ಲಿ ಅಷ್ಟದಿಗ್ಗಜಗಳೆಂಬ ಎಂಟುಜನ ತೆಲುಗು ಕವಿ ಗಳಿದ್ದರು. ಕನ್ನಡ ಅರಸನಾದ ಇವನು ತೆಲುಗು ಕವಿಗಳನ್ನು ಹೆಚ್ಚಾಗಿ ಪೋಷಿಸಿದನಲ್ಲದೇ ತಾನು ಕೂಡಾ ತೆಲುಗು ಭಾಷೆಯಲ್ಲಿ ಪಂಚಕಾವ್ಯಗಳಲ್ಲಿ ಒಂದಾದ "ಆಮುಕ್ತಮಾಲ್ಯದ" ಎಂಬ ಪ್ರಬಂಧಕಾವ್ಯವನ್ನು ರಚಿಸಿ ದ್ದಾನೆ. ಇದು ಚಂಪೂಕಾವ್ಯ.

ಅಲ್ಲಸಾನಿ ಪೆದ್ದನ ಮೊದಲನೆಯ ಆಸ್ಥಾನಕವಿ. ಇವನ ಕೃತಿ "ಮನುಚರಿತ್ರೆ". ಇದನ್ನು ಶ್ರೀ ಕೃಷ್ಣದೇವರಾಯನು ಅಂಕಿತ ಮಾಡಿ ಕೊಂಡು ಕವಿಯನ್ನು ಗೌರವಿಸಿದಾಗ ಅವನ ಕಾಲಿಗೆ ಭಂಗಾರದ "ಕವಿಗಂಡ ಪೆಂಡೇರ"ವೊಂದು ಹಾಕಿ ಪಲ್ಲಕ್ಕಿಯಲ್ಲಿ ಕೂರಿಸಿ ನಗರದಲ್ಲಿ ಮೆರವಣಿಗೆ ಮಾಡಿದಾಗ ಪಲ್ಲಕ್ಕಿಯನ್ನು ಹೊತ್ತುಕೊಂಡು ಸ್ವಲ್ಪದೂರ ಹೋದನೆಂದು ಕವಿಯೇ ಹೇಳಿಕೊಂಡಿದ್ದಾನೆ. ಇವನಿಗೆ ಆಂಧ್ರಕವಿತಾ ಪಿತಾಮಹನೆಂದು ಬಿರುದಿದೆ.

ಇವನು ರಚಿಸಿದ ಮನುಚರಿತ್ರೆ ಚಂಪೂಕಾವ್ಯ. ಇದು ಅಷ್ಟಾದಶ ವರ್ಣನೆಗಳಿಂದ ಕೂಡಿದೆ. ಕವಿತ್ರಯರು ಅನುಸರಿಸಿದ ಭಾಷಾಂತರೀ ಕರಣ ಮಾರ್ಗವನ್ನು ಬಿಟ್ಟು ಸ್ವತಂತ್ರನಾಗಿ ರಚನೆ ಮಾಡಿದನು. ಇದನ್ನನು ಸರಿಸಿ ನಂದಿತಿಮ್ಮನನು "ಪಾರಿಜಾತಾಪಹರಣ"ವನ್ನೂ, ರಾಮರಾಜ ಭೂಷಣನು (ಭಟ್ಟುಮೂರ್ತಿ) "ವಸುಚರಿತ್ರೆ"ಯನ್ನೂ, ಧೂರ್ಜಟಿಕವಿ "ಕಾಹಸ್ತಿಮಹಾತ್ಮ್ಯೆ"ವನ್ನೂ, ಮಾದಯಗಾರಿಮಲ್ಲನ "ರಾಜಶೇಖರ ವಿಲಾಸ"ವನ್ನೂ, ಪಿಂಗಳಿ ಸೂರನನು "ಕಳಾಪೂರ್ಣೋದಯ"ವನ್ನೂ, ತೆನ್ನಾಲಿ ರಾಮಲಿಂಗಕವಿ "ಪಾಂಡುರಂಗಮಹಾತ್ಮ್ಯೆ" ವನ್ನೂ ರಚಿಸಿದರು. ಪ್ರಬಂಧರಚನಾರೀತಿ ತೆಲುಗು ಸಾಹಿತ್ಯದಲ್ಲಿ ಒಂದು ಪ್ರತ್ಯೇಕವಾದ

ರಚನೆ. ಒಂದು ಚಿಕ್ಕ ಕಥೆಯನ್ನು ಪುರಾಣಗಳಿಂದ ತೆಗೆದುಕೊಂಡು ಅಷ್ಟಾದಶವರ್ಣನೆಗಳನ್ನು ತುಂಬಿ ಒಂದು ದೊಡ್ಡ ಕಾವ್ಯವನ್ನಾಗಿ ರಚಿಸುವುದು ಈ ಕಾಲದ ರಚನಾವೈಶಿಷ್ಟ್ಯವೆನ್ನಬಹುದು.

# ನಂದಿ ತಿಮ್ಮನ

ಕೃಷ್ಣದೇವರಾಯನ ಆಸ್ಥಾನದಲ್ಲಿದ್ದ ಅಷ್ಟದಿಗ್ಗಜಗಳಲ್ಲಿ ಎರಡನೆಯವನು. "ಪಾರಿಜಾತಾಪಹರಣ" ವೆಂಬ ಪ್ರಬಂಧ ಕಾವ್ಯವನ್ನು ರಚಿಸಿದ್ದಾನೆ. ಕೃಷ್ಣದೇವರಾಯನಿಗೂ ಅವನ ಪಟ್ಟಮಹಿಷಿ ಚಿನ್ನಾದೇವಿಗೂ ಆದ ಒಂದು ಪ್ರಣಯ ಕಲಹವನ್ನು ಆಧಾರವಾಗಿ ಮಾಡಿಕೊಂಡು ಈ ಗ್ರಂಥವನ್ನು ರಚಿಸಿ ಕೃಷ್ಣದೇವರಾಯನಿಗೆ ಅರ್ಪಣೆ ಮಾಡಿದ್ದಾನೆ. ಶ್ರೀಕೃಷ್ಣನು ಸತ್ಯಭಾಮೆಯ ಕೋಪೋಪಶಮನವನ್ನು ಮಾಡುವುದಕ್ಕೆ ಪಾರಿಜಾತ ವೃಕ್ಷವನ್ನು ದೇವಲೋಕದಿಂದ ತರುವುದು ಇದರ ಕಥಾಸಾರಾಂಶ. ಆ ವೃಕ್ಷವನ್ನು ತಂದಮೇಲೆ ಇಬ್ಬರಿಗೂ ಪ್ರಣಯ ಕಲಹವು ಮುಕ್ತಾಯವಾಯಿತೆಂದೂ ಹಾಗೆಯೇ ಈ ಗ್ರಂಥವನ್ನು ಕೃಷ್ಣದೇವರಾಯನು ಕೇಳಿದ ಮೇಲೆ ಆತನಿಗೂ ಚಿನ್ನಾದೇವಿಗೂ ರಾಜೀ ಆಯಿತೆಂದು ಒಂದು ಐತಿಹ್ಯವು ಬೆಳೆದುಬಂದಿದೆ. ಕವಿಯು ತನ್ನ ಸಹಜ ಪಾಂಡಿತ್ಯದಿಂದ ಸನ್ನಿವೇಶಗಳನ್ನು ಬಹುಸೊಗಸಾಗಿ ವರ್ಣನೆಮಾಡಿದ್ದಾನೆ. ಇವನು ಮೂಗಿನ ಮೇಲೆ ಒಂದು ಸೊಗಸಾದ ಪದ್ಯವನ್ನು ರಚಿಸಿ ಸಭೆಯಲ್ಲಿ ಹೇಳಿದಾಗ ಇವನಿಗೆ ಮುಕ್ಕು ತಿಮ್ಮನ ಎಂದು ಹೆಸರು ಬಂದಿತಂತೆ. "ಮುಕ್ಕು ತಿಮ್ಮನಾರ್ಯುರ್ಮುದ್ದು ಪಲ್ಕು" ಎಂದು ಇವನ ಕವಿತ್ವವನ್ನು ಮೆಚ್ಚುತ್ತಾರೆ. ಇವನ ರಚನೆಯು ಮುದ್ದಾಗಿ ರಸವತ್ತಾಗಿ ಇರುತ್ತದೆ.

ಮುಕ್ಕು ತಿಮ್ಮನನು ತನ್ನ "ಪಾರಿಜಾತಾಪಹರಣ" ಕಾವ್ಯಕ್ಕೆ ಮೂಲ ಕಥಾವಸ್ತುವನ್ನು ಕನ್ನಡದಲ್ಲಿ ೧೩ ನೇ ಶತಮಾನದಲ್ಲಿ ರುದ್ರಭಟ್ಟನು ಬರೆದ "ಜಗನ್ನಾಥ ವಿಜಯ"ದಿಂದ ಆರಿಸಿಕೊಂಡಿದ್ದಾನೆ. ಹೀಗೆಂದು ಕವಿ ಹೇಳಿಕೊಂಡಿಲ್ಲ. ಸಂಶೋಧನೆಯಿಂದ ಗೊತ್ತಾಗಿದೆ. ಅಲ್ಲಿ ೨೦೦ ಪದ್ಯಗಳಲ್ಲಿ ವರ್ಣಿಸಲ್ಪಟ್ಟ ಕೃಷ್ಣಪಾರಿಜಾತ ಕಥೆಯನ್ನು ಮುಕ್ಕು ತಿಮ್ಮನನು

ಶರ್ಂ ಪದ್ಯಗಳಲ್ಲಿ ಃಬೆಳಸಿ ಒಂದು ದೊಡ್ಡ ಕಾವ್ಯವನ್ನಾಗಿ ಬರೆದಿದ್ದಾನೆ. ರುದ್ರಭಟ್ಟನು ಬರೆದಿರುವ ಕ್ರಮದಲ್ಲಿಯೇ ನಾರದಾಗಮನ, ನಾರದನು ಪಾರಿಜಾತಪುಷ್ಪವನ್ನು ಶ್ರೀಕೃಷ್ಣನಿಗೆ ರುಕ್ಮಿಣೀ ಮನೆಯನೆಯಲ್ಲಿದ್ದಾಗ ಕೊಡುವುದು, ಪಾರಿಜಾತಪುಷ್ಪಮಹಿಮೆ, ಸತ್ಯಭಾಮೆಗೆ ಕೋಪ ಮತ್ತು ಅಸೂಯೆ ಬರುವುದು, ಕೃಷ್ಣನು ಅವಳ ಅಂತಃಪುರಕ್ಕೆ ಹೋಗಿ ಉಪ ಶಮನ ಮಾಡುವುದು ಯಥಾಕ್ರಮವಾಗಿ ಮುಕ್ಕುತಿಮ್ಮನ ಅನುಸರಿಸಿ ದ್ದಾನೆ. ಕೆಲವು ಕನ್ನಡ ಪದ್ಯಗಳಿಗೆ ಸಮಾನವಾಗಿ ಅರ್ಥಬರುವ ಪದ್ಯಗಳು ತೆಲುಗು "ಪಾರಿಜಾತಾಪಹರಣ" ದಲ್ಲಿವೆ. ಇದನ್ನು ಸಂಪೂರ್ಣವಾಗಿ ಸಂಶೋಧನೆ ಮಾಡಬೇಕು.

# ಧೂರ್ಜಟಿ ಕವಿ

ಇವನು ಶ್ರೀಕೃಷ್ಣದೇವರಾಯನ ಆಸ್ಥಾನದಲ್ಲಿದ್ದ ಸುಪ್ರಸಿದ್ಧ ಕವಿ. ಇವನು "ಕಾಳಹಸ್ತೀಶ್ವರ ಶತಕ"ವನ್ನು, "ಶ್ರೀಕಾಳಹಸ್ತಿ ಮಾಹಾತ್ಮ್ಯ" ವನ್ನು ರಚಿಸಿದ್ದಾನೆ. ಕಿರಾತಾರ್ಜುನೀಯವು ಶ್ರೀಕಾಳಹಸ್ತಿ ಮಾಹಾತ್ಮ್ಯದ ಗ್ರಂಥದಿಂದ ತೆಗೆದುಕೊಂಡಿರುವ ಘಟ್ಟ.

# ರಂಗನಾಥುಡು

## ("ರಂಗನಾಥ ರಾಮಾಯಣಮು")

ಶ್ರೀರಾಮನ ಕಥೆಯನ್ನು ಅನೇಕ ಕವಿಗಳು ಅನೇಕ ಭಾಷೆಗಳಲ್ಲಿ ರಚಿಸಿ ಧನ್ಯರಾದರು. ಎಲ್ಲಾ ಭಾಷೆಗಳಿಗೂ ವಾಲ್ಮೀಕಿ ರಾಮಾಯಣವೇ ಮೂಲಾಧಾರ. ತೆಲುಗಿನಲ್ಲಿಯು ಅನೇಕ ಕವಿಗಳು ವಾಲ್ಮೀಕಿ ರಾಮಾಯಣವನ್ನು ಅನುವಾದ ಮಾಡಿದರು. ರಂಗನಾಥರಾಮಾಯಣವು ಮೊಟ್ಟ ಮೊದಲನೆಯದು. ಇದು ದ್ವಿಪದಿಯಲ್ಲಿ ರಚಿತವಾಗಿರುವುದರಿಂದ ಜನ ಪ್ರಿಯತ್ವವನ್ನು ಹೊಂದಿದೆ.

ತೆಲುಗಿನಲ್ಲಿ ಕವಿಗಳ ಹೆಸರಿನಲ್ಲಿಯೇ ರಾಮಾಯಣಗಳು ರಚಿತ

ವಾಗಿವೆ. ಉದಾಹರಣೆಗಾಗಿ, ಪ್ರಾಚೀನರಲ್ಲಿ ಭಾಸ್ಕರನು "ಭಾಸ್ಕರ ರಾಮಾಯಣಮು" ಗೋಪಿನಾಥ ಕವಿ "ಗೋಪಿನಾಥ ರಾಮಾಯಣಮು" ಕುಂಬಾರರ ಕುಲಕ್ಕೆ ಸೇರಿದ ಮೊಲ್ಲ ಎಂಬ ಮಹಿಳಾಕವಿ "ಮೊಲ್ಲ ರಾಮಾಯಣ" ವನ್ನು ರಂಗನಾಥನು "ರಂಗನಾಥ ರಾಮಾಯಣ"ವನ್ನು ರಚಿಸಿದ್ದಾರೆ. ಇವನ ಕಾಲ ೧೩. ನೆಯ ಶತಮಾನವೆಂದು ಹೇಳಲಾಗಿದೆ. ಇನ್ನೂ ಸರಿಯಾಗಿ ವಿಮರ್ಶಕರು ಇತ್ಯರ್ಥಮಾಡಿಲ್ಲ. ಗ್ರಂಥ ಕರ್ತೃತ್ವದಲ್ಲಿಯೂ ಶಂಕೆಗಳಿವೆ. ಗೋನ ಬುದ್ಧಾರೆಡ್ಡಿ ಎಂಬುವರು ಬರೆದಿದ್ದಾರೆಂದು ಕೀ.ಶೇ. ಡಾಕ್ಟರ್ ಸಿ. ಆರ್. ರೆಡ್ಡಿ ಅವರು ಅಭಿಪ್ರಾಯಪಟ್ಟಿದ್ದಾರೆ. ಅದರಂತೆ ಒಂದು ದೊಡ್ಡ ಪೀಠಿಕೆಯಿಂದ ಆಂಧ್ರ ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ರಂಗನಾಥ ರಾಮಾಯಣವನ್ನು ಪ್ರಕಟಿಸಿದ್ದಾರೆ. ಏನೇ ಇರಲಿ ಈ ರಾಮಾಯಣವು ದ್ವಿಪದಿಯಲ್ಲಿ ರಚಿಸಿರುವುದರಿಂದ ತೆಲುಗು ದೇಶದಲ್ಲಿ ಜನಪ್ರಿಯತ್ವವನ್ನು ಹೊಂದಿದೆ. ಮೂಲದಲ್ಲಿ ಇಲ್ಲದೆ ಇರುವ ಕೆಲವು ಸನ್ನಿವೇಶಗಳನ್ನು ಕವಿ ಹೃದಯಂಗಮವಾಗಿ ತನ್ನ ವರ್ಣನಾಕೌಶಲ್ಯದಿಂದ ಚಿತ್ರಿಸಿದ್ದಾನೆ. ರಮ್ಯವಾಗಿವೆ.

# ವೇಮನ

ಆಂಧ್ರ ದೇಶದಲ್ಲಿ ವೇಮನನನ್ನು ತಿಳಿಯದೆ ಇರುವವರಿಲ್ಲ. ಅವನ ಪದ್ಯಗಳನ್ನು ಬಾಯಿಪಾಠವಾಗಿಟ್ಟುಕೊಂಡು ಆಬಾಲ ಗೋಪಾಲರು ಸಮಯ ಬಂದಾಗ ಹೇಳಿಕೊಂಡು ಆನಂದ ಪಡುತ್ತಾರೆ. "ವಿಶ್ವದಾಭಿರಾಮ ವಿನುರ ವೇಮ" ಎಂದು ಕೇಳದಿರುವವರೇ ಇಲ್ಲ. ವೇಮನ, ಕವಿಗಳ ಸಂಪ್ರದಾಯದಲ್ಲಿ ಕವಿತ್ವರಚನೆ ಮಾಡಿಲ್ಲ. ತನ್ನ ಅನುಭವದಿಂದ ಸ್ವೇಚ್ಛೆಯಾಗಿ ಹೇಳಿರುವ ಪದ್ಯಗಳನ್ನು ಅವನ ಶಿಷ್ಯರೂ ಇತರರೂ ಬರೆದಿಟ್ಟಿರುವುದೇ ಹೊರತು ಅವನೇ ಒಂದು ಪುಸ್ತಕ ರೂಪದಲ್ಲಿ ಬರೆದಿಟ್ಟಿಲ್ಲ. ಇತ್ತೀಚಿಗೆ ಪ್ರಕಟನಕಾರರು ಸುಮಾರು ೩೦೦೦ ರ ವರೆಗೂ ಪದ್ಯಗಳನ್ನು ಕಂಡು ಹಿಡಿದು ಅಚ್ಚುಹಾಕಿರುತ್ತಾರೆ. ಕನ್ನಡ ನಾಡಿನಲ್ಲಿ ಸರ್ವಜ್ಞ ಕವಿಯ ವಚನಗಳು ಹೇಗೆ ಜನಪ್ರಿಯವಾಗಿವೆಯೋ ಹಾಗೆಯೇ ವೇಮನನ ಪದ್ಯ

ಗಳು ಆಂಧ್ರದೇಶದಲ್ಲಿ ಚಿಕ್ಕಂದಿನಿಂದಲೂ ಎಲ್ಲರಿಗೂ ಪರಿಚಯವಾಗಿವೆ.

ವೇಮನ ರೆಡ್ಡಿ ವಂಶದಲ್ಲಿ ಹಟ್ಟಿದವನು. ಇವನ ಕಾಲವು ೧೭ ನೆಯ ಶತಮಾನವೆಂದು ಕೆಲವರು ವಿಮರ್ಶಕರು ಹೇಳಿದ್ದಾರೆ. ತೆಲುಗು ನಿಂಘಟು ವನ್ನು ರಚಿಸಿದ ಬ್ರೌನ್ ಎಂಬ ದೊರೆ ವೇಮನನ ವಿಚಾರವನ್ನು ಚೆನ್ನಾಗಿ ವಿಮರ್ಶಿಸಿ, ವೇಮನ ಅನಂತಪುರ ಜಿಲ್ಲೆಯ ಕದಿರಿ ತಾಲ್ಲೂಕಿನ ಕಟಾರು ಪಲ್ಲಿಯವನೆಂದು ಹೇಳಿದ್ದಾನೆ. ಈಗ ವರ್ಷಂಪ್ರತಿ ಆ ಗ್ರಾಮದಲ್ಲಿ ವೇಮನ ವಂಶದವರೆಂಮ ಹೇಳಿಕೊಂಡಿರುವ ಕೆಲವರು ವೇಮನನ ವಿಗ್ರಹಕ್ಕೆ ಆರಾಧನೆ ಮಾಡುತ್ತಾರೆ. ಸಾವಿರಾರುಜನರು ಈ ಸಮಾರಂಭದಲ್ಲಿ ಭಾಗ ವಹಿಸಿ ವೇಮನನ ವಚನಗಳನ್ನು ಕೇಳಿಆನಂದ ಪಡುತ್ತಾರೆ

ವೇಮನ ಒಂದು ಸಂಪನ್ನ ವಂಶದಲ್ಲಿದ್ದವನು. ರೆಡ್ಡಿ ಅರಸರ ವಂಶಕ್ಕೆ ಸೇರಿದವನೆಂದು ಕೆಲವರು ಹೇಳಿದ್ದಾರೆ. ಯೌವನಾವಸ್ಥೆಯಲ್ಲಿ ವೇಶ್ಯಾಲಂಪಟನಾಗಿ ತಿರುಗುತ್ತಿದ್ದನು. ಇವನ ಅಣ್ಣ ಅತ್ತಿಗೆಯರು ಎಷ್ಟು ಹೇಳಿದರೂ ದಾರಿಗೆ ಬರಲಿಲ್ಲ. ವೇಶ್ಯೆಯಿಂದಲೇ ಇವನಿಗೆ ಒಂದುಸಲ ಜುಗುಪ್ಸೆಯಾಗಿ ವಿರಾಗಿಯಾಗಿಬಿಟ್ಟನು. ಲೋಹಗಳನ್ನು ಬಂಗಾರು ಮಾಡುವ ವಿದ್ಯೆ ಇವನಿಗೆ ಬರುತ್ತಿದ್ದೆಂದು ಆವನೇ ಹೇಳಿಕೊಂಡಿದ್ದಾನೆ. ಆ ವಿಧಾನವನ್ನು ಒಂದು ಪದ್ಯದಲ್ಲಿ ಹೇಳಿದ್ದಾನೆ. ಆದರೆ ಆದರ ಪ್ರಕಾರ ನಾವು ಮಾಡಿದರೆ ಆಗುವುದಿಲ್ಲ. ಅದರ ಕ್ರಿಯೆಯನ್ನು ಗುರುಮುಖವಾಗಿ ತಿಳಿಯಬೇಕಂತೆ. ಇವನು ಇದನ್ನು ಒಬ್ಬ ಅಕ್ಕಸಾಲಿಗ ಅಭಿರಾಮನ ಹತ್ತಿರ ಶಿಷ್ಯನಾಗಿದ್ದು ತಿಳಿದುಕೊಂಡಿದ್ದಾನೆ. ಅದರಿಂದಲೇ ಇವನು ತನ್ನ ಪದ್ಯಗಳಲ್ಲಿ ನಾಲ್ಕನೆಯ ಪಾದವನ್ನು ತನ್ನ ಗುರುವಿನ ಹೆಸರಿನ ಮೇಲೆ ಕಟ್ಟಿದ್ದಾನೆ. ಅಭಿರಾಮನು ಆವನು ಗುರುವೆಂದು ಹೇಳುತ್ತಾರೆ.

ಇವನ ಕಾಲವನ್ನು ಕುರಿತು ಒಂದು ನಿರ್ಧಾರಕ್ಕೆ ಯಾವ ವಿಮರ್ಶ ಕನೂ ಬಂದಿಲ್ಲ. ಕನ್ನಡ ಸಾಹಿತ್ಯದಲ್ಲಿ ಸರ್ವಜ್ಞನ ಕಾಲ ಹೇಗೆ ಇತ್ಯರ್ಥ ವಾಗಿಲ್ಲವೋ ಹಾಗೆಯೇ ವೇಮನನ ಕಾಲವೂ ನಿರ್ಧಾರವಾಗಿಲ್ಲ. ೧೭ ನೆಯ ಶತಮಾನವೆಂದೂ ಸರ್ವಜ್ಞನಿಗೂ ಇವನಿಗೂ ವಾದ ಪ್ರತಿವಾದಗಳಾಗಿವೆ ಯೆಂದೂ ಹೇಳುತ್ತಾರೆ. ವೇಮನ 'ಆಟವೆಲದಿ' ಪದ್ಯಮೂಲಕ ತನ್ನ ವೇದಾಂತ ಸಾರವನ್ನು ಸಾರಿದ್ದಾನೆ. ಜನರಿಗೆ ಇವನ ಪದ್ಯಗಳ ಮೇಲೆ

ಇರುವಂತಹ ಪ್ರೀತಿ ಬೇರೆ ಪುರಾಣ ಕವಿಗಳ ಪದ್ಯಗಳ ಮೇಲೆ ಆಷ್ಟೊಂದಿಲ್ಲ. ಇವನ ಕವಿತ್ವವು ಜನಪ್ರಿಯವಾಗಿ ಪಂಡಿತಪಾಮರರಿಗೂ ಅರ್ಥವಾಗುತ್ತದೆ. ಇವನು ಹೇಳಿರುವ ವಿಷಯಗಳು ಹೃದಯಂಗಮವಾಗಿ ಆಕರ್ಷಣೀಯವಾಗಿರುತ್ತವೆ. ಒಂದು ವಿಷಯವನ್ನು ಹೇಳಿ ಅದನ್ನು ಸಮರ್ಥನೆ ಮಾಡುವುದಕ್ಕೆ ಒಳ್ಳೆಯ ಉದಾಹರಣೆಗಳನ್ನು ಕೊಡುತ್ತಾನೆ. ಇವನ ಕವಿತ್ವದಲ್ಲಿ ಮಹಾಕವಿಗಳ ರಚನಾಸೌಂದರ್ಯ, ವಾಗ್ಮಿತ್ವ, ಮುಂತಾದ ಗುಣಗಳಿವೆ. ಹತ್ತಾರು ಶಬ್ದಗಳಿಂದಲೇ ವಿಸ್ತಾರವಾದ ವಿಚಾರವನ್ನು ಜನಮನಕ್ಕಂಟುವಂತೆ ಹೇಳುವುದೇ ವೇಮನನ ವೈಶಿಷ್ಟ್ಯ. ಶೂನ್ಯ ಹೃದಯದಲ್ಲಿ ನವಚೈತನ್ಯವನ್ನುಂಟುಮಾಡಿ ನೈತಿಕ ಮಾರ್ಗದಿಂದ ಮಾನವನನ್ನು ಮತ್ತಷ್ಟು ಮೇಲ್ಮಟ್ಟಕ್ಕೆ ಏರಿಸುವ ಸಹಜಶಕ್ತಿ ಇದೆ. ಸಮಾಜದಲ್ಲಿರುವ ಅಜ್ಞಾನ, ಅನೀತಿ, ಆಲಸ್ಯ, ಮೊದಲಾದ ಅನೇಕ ಮಹಾರೋಗಗಳಿಗೆ ಸಂಜೀವನೀ ಮಾತ್ರೆಗಳಂತಿರುವ ತನ್ನ ಕೆಲವು ಪದ್ಯಗಳಿಂದ ನಿರ್ದಾಕ್ಷಿಣ್ಯವಾಗಿ ನಿಷ್ಪಕ್ಷಪಾತವಾಗಿ ಫಲಕಾರಿಯಾದ ಹಲವು ಚಿಕಿತ್ಸೆಗಳನ್ನು ಮಾಡಿದ ಕವಿ ವೇಮನನನ್ನು ಘನ ವೈದ್ಯನೆನ್ನಬಹುದು. ವೇಮನನ ಸಮಾಜ ಸೇವೆಗಾಗಿ ಆಂಧ್ರರು ಚಿರಋಣಿಗಳು.

---

# విషయసూచిక

## 1. పోతన - శ్రీభాగవతము

# గజేంద్రమోక్షము

### (అష్టమస్కంధము)

మ. కలభంబుల్ సెఱలాడుఁ బల్వలము లాఘ్రాణించి
మట్టాడుచున్,
ఫలభూజంబులు రాయుచుం జివురు జొంపంబుల్ వడిన్
మేయుచుం,
బులులం గాఱెనుపోతులన్ మృగములన్ బోనీక
శిక్షించుచున్,
గొలఁకు ల్సొచ్చి కలంచుచున్ గిరులపై గొబ్బిళ్లు
గోరాడుచున్. 1

క. తొండంబుల మదజలవృత
గండంబులఁ గుంభములను ఘట్టనసేయం
గొండలు తలక్రిందై పడు
బెండుపడున్ దిశలు సూచి బెగడున్ జగముల్. 2

క. ఎక్కడఁ జూచిన లెక్కకు
నెక్కువ యై యడవి నడచు నిభయూథములో
నొక్క కరినాథుఁ డెడ తెగి
చిక్కెనొకకరేణుకోటి సేవింపంగన్.

వ, ఇట్లు వెనుక ముందఱ నుభయపార్శ్వంబుల నరుగుదెంచు నేనుఁగు గములన్ గానక తెఱంగు దప్పి తొఱంగువడి యీశ్వరాయత్తం బయిన చిత్తంబు సంవిత్తంబు గాకుం డుటం జేసి తానును దనకరేణుసముదయంబును నొక్క తెఱువై పోవుచు, 4

సీ. పల్వలంబుల లేఁత పచ్చిక మచ్చికఁ
జెలుల కందిచ్చు నచ్చికము లేక
నివురుజొంపములఁ గ్రొవ్వెలయు పూఁగొమ్మలఁ
బ్రాణవల్లభలకుఁ బాలువెట్టు
ఘనదానశీతల కర్ణతాళంబుల
దయితల చెమటార్చుఁ దనువు లరసి
మృదువుగాఁ గొమ్మల మెల్లనిగళములు
నివురుచుఁ బ్రియముతో నెఱపు గఱపు
తే. పిఱుఁదు చక్కట్ల డగ్గఱి ప్రేమఁ జూపు
డాసి మూర్కొని దివికి దొండంబు సాఁపు
వెద వివేకించుఁ గ్రీడించు విశ్రమించు
మత్తమాతంగమల్లంబు మహిమతోడ, 5

సీ. తనకుంభములపూర్ణతకు డిగ్గి యువతుల
కుచములు బయ్యెద కొంగు లీఁగఁ
దనయానగంభీరతకుఁ జాల కబలల
యానంబు లందెల నండగొనఁగఁ
దనకరశ్రీఁ గని తలఁకి బాలలచిఱు
దొడలు మేఖలదీప్తి దోడుపిలువఁ

దనదంతరుచి కోడి తరుణులనగవులు
ముఖచంద్రదీప్తుల ముసుఁగు దిగువఁ
తే. దనదులావణ్యరూపంబు దలఁచి చూడ
నంజనాభ్రము కపిలాది హరిదిభేంద్ర
దయిత లందఱు దనవెంటఁ దగిలి నడువఁ
గుంభివిభుఁ డొప్పె నొప్పుల కుప్పవోలె. 6

వ. మఱియు నానాగహనవిహారణమహిమతో మదగజేంద్రము మార్గంబు దప్పి పిపాసాపరాయత్తచిత్తంబున మత్తక రేణుల మొత్తంబును దానునుం జనిచని, 7

మ. అటఁ గాంచెం గరిణీవిభుండు నవపుల్లాంభోజకల్హారమున్
నటదిందిందిరవారముం గమఠమీ నగ్రాహదుర్వారమున్
వటహింతాలరసాలసాలసుమనో వల్లీకుటీతీరముం
జటులోద్ధూతమరాళచక్రబక సంచారంబుఁ గాసారమున్

వ. ఇట్లనన్యపురుషసంచారంబయి నిష్కళంకంబైన యప్పంకజాకరంబుఁ బొడఁగని, 9

సీ. తోయజగంధంబు దోఁగిన చల్లని
మెల్లనిగాడ్పుల మేను లలర
కమలనాళాహార విమలవాక్కలహంస
రవములు సెవుల పండువులు సేయ
పుల్లదిందీవరాంభోరుహామోదంబు
ఘ్రాణరంధ్రంబుల గారవింప
నిర్మలకల్లోల నిర్గతాసారంబు
వదనగహ్వరముల వాడు దేర్చ

తే. త్రిజగదభినవసౌభాగ్య దీప్తమైన
విభవ మీాక్షణములకును విందుసేయ
నరిగి పంచేంద్రియవ్యవహారములను
మఱచి మత్తేభయూథంబు మడుఁగు సొచ్చె. 10

క. తొండంబులఁ బూరించుచు
గండంబులఁ జల్లుకొనుచు గళగళరవముల్
మెండుకొన వలుదకడుపులు
నిండ న్వేదండకోటి నీరుం ద్రావెన్. 11

మ. ఇభలోకేంద్రుఁడు హస్తరంధ్రముల నీ రెక్కించి పూరించి చం
డభమార్గంబున కెత్తి నిక్కి వడినుద్ఘాడించి పైఁ జిమ్మునా
రభటిన్నీరములోనఁ బెల్లగిసి నక్రగ్రాహపాఠీనముల్
నభమం దాడెడు మీానకర్కటములం బట్టెన్ సురల్
బ్రమాన్పడన్. 12

వ. మఱియు నగ్గజేంద్రంబు నిరర్గళవిహారంబున. 13

సీ. కరిణీకరోజ్ఝిత కంకణచ్ఛటఁ దోఁగి
సెలయేటినీలాద్రి చెలువుఁ దెగడు
హస్తినీహస్త విన్యస్తపద్మంబుల
వేయిగన్నులవాని వెరవు సూపుఁ
గలభీసముత్కీర్ణ కహ్లారరజమునఁ
గనకాచలేంద్రంబు ఘనతఁ దాల్చుఁ
గుంజరీపరిచిత కుముదకాండంబుల
ఫణిరాజమండన ప్రభ వహించు

ఆ. మదకరేణుముక్త మౌక్తికశుక్తుల
మెఱుఁగుమొగులతోడ మేలమాడు
నెదురులేనిగరిమ నిభరాజమల్లంబు
వనజగేహకేళి ద్రావునపుడు. 14

వ. మఱియు నాసరోవరలక్ష్మీమదగజేంద్రవివిధవిహార వ్యాకులిత
నూతనలక్ష్మీ విభవ యై శరీరాలంకార యగుకుసుమ
కోమలియునుంబోలి యుండె నంత. 15

సీ. భుగభుగాయితభూరి బుద్బుదచ్ఛటలతోఁ
గదలుచో దివికి భంగంబు లెగయ
భువనభయంకర ఫూత్కారరవమున
ఘోరనక్రగ్రాహ కోటి బెగడ
వాలవిక్షేపదుర్వారజంఝూనిల
వశమున ఘుమఘుమావర్త మడరఁ
గల్లోలజాలసంఘట్టనంబులఁ దటీ
తరు లమూలంబు లై ధరణిఁ గూల

తే. సరసిలో నుండి పొడగని సంభ్రమించి
యుదరి కుప్పించి లంఘించి హుంకరించి
భానుఁ గబళించి పట్టు స్వర్భానుపగిది
నొక్క మకరేంద్రుఁ డిభరాజు నొడిసి పట్టె. 16

క. వడిఁ దప్పించి కరీంద్రుఁడు
నిడుదకరం బెత్తి వ్రేయ నీరాటంబుం
బొడవడఁగినట్లు జలములఁ
బడి కడువడిఁ బట్టెఁ బూర్వపదయుగళంబున్. 17

చ. పదములు వట్టినం దలఁకు పాటొకయింతయు లేక శూరతన్
మదగజవల్లభుండు ధృతిమంతుఁడు దంతయుగాంతఘట్టనన్
జెదరఁగఁ జిమ్మ నమ్మకరిచిప్పలు పాదులు దప్ప
నొప్పఱన్
వదలి జలగ్రహంబుకరి వాలముమూలముఁ జీరె గోరులన్.

క. కరిఁ దిగుచు మకరి సరసికిఁ
గరి దరికిని మకరిఁ దిగుచుఁ గరకరి బెరయన్
గరికి మకరి మకరికిఁ గరి
భర మనుచును నతలకుతల భటు లరుదుపడన్. 19

వ. ఇట్లు కరిమకరంబులు రెండును నొండొంటసముద్దండదండంబులై తలపడి నిఖిలలోకాలోకనభీకరంబులై యన్యోన్య విజయశ్రీవశీకరంబు లయి సంక్షోభితకమలాకరంబులై హరిహరియును గిరిగిరియునుం దాఁకి పిఱుతివియక పెనంగు తెఱంగున నీరాటంబయినపోరాటంబునం బట్టుచు వెలికి లోనికిం దిగుచుచుఁ గొలంకుకలంకంబొందఁ గడువడి నిట్టట్టువడి తడఁబడక బుడబుడానుకారంబులై బుగులు బుగుల్లను చప్పుళ్ళతో నురువులు గట్టుచు జలంబు లుప్పరం బెగయం జప్పరించుచు వదన గహ్వారంబులనప్పళించుచు నిశితనితాంతదురంతదంతకుంతంబుల నింతింతలు తునియ లయి నెప్పళంబునం బునుకచిప్పలు కుదుళ్ళు దప్పి రక్తంబులు గ్రమ్ముదేఱ హుమ్మని యొక్కుమ్మడిం జిమ్ముచు నితరేతరసమాకర్షణంబులం గదలక పదంబుల మొదలి పట్టు వదలక కుదురై యుండుచు పరిభ్రమణవేగంబున

జలంబులం దిరుగుచుఁ గమఠకర్కటగండకమండూకాది
సలిలనిలయంబుల ప్రాణంబులు క్షీణంబులుగా నొండొంటిఁ
దాఁకు రభసంబున నిక్కలు చెడ మ్రక్కం ద్రొక్కుచు
మెండుచెడి బెండువడ నాఁచుగుల్లచిప్పతండంబులఁ బరస్పర
తాడనంబులకు నడ్డంబుగా నొడ్డుచు నోలమాసగొనక
గెలుపు తలంపులు బెట్టిదంబులై రెట్టింప సహోరాత్రం
బులంబోలెఁ గ్రమక్రమ విజృంభమాణంబులయి బహు
కాలకలహసన్నాహంబులై నిర్గతనిద్రాహారంబులై యవ
క్రపరాక్రమఘోరంబులై పోరుచున్న సమయంబున. 20

క. జవమును జలమును బలమును
వివిధములుగఁ బోరుకరటివీరతకు భువిన్
దివి మకరమీనకర్కట
నివహము లొక్కటన మిత్రనిలయముఁ బొందెన్. 21

శా. ఆటోపంబునఁ జిమ్ము జొమ్మగల వజ్రాభీలదంతంబులన్
దాటించున్ మెడఁ జుట్టిపట్టి హరిదోర్దండాభశుండా
హతిన్
నీటన్ మాటికిమాటికిం దిగువఁగా నీరాటమున్ నీటిపో
రాటం దోటమిపాటుఁ జూపుట కరణ్యాటంబు వాచాటమై.

ఆ. మకరితోడఁ బోరు మాతంగవిభుని నొ
క్కరుని విడిచి పోవఁ గాళ్లు రాక
కోరి చూచుచుండెఁ గుంజరీయూథంబు
మగలు తగులు గారె మగువలకును. 23

వ. అంత. 24

ఆ. జీవనంబు తనకు జీవనం బై యుంట
చలవుఁ జలము నంతకంత కెక్కి
మకర మొప్పె డస్సె మత్తేభమల్లంబు
బహుళపక్షశీత భానుపగిది. 25

మ. ఉఱుకుం గుంభయుగంబుపై హరిక్రియన్ హుమ్మంచుఁ బాదంబుల
న్నెఱయుం గంఠము వెన్నుదన్ను నెగయున్ హేలాగతి న్వాలమున్
జఱచు న్నుగ్గుగఁ దాఁకు ముంచు మునుఁగున్ శల్యంబులుం దంతముల్
విఱుగన్ వ్రేయుచుఁ బొంచి పొంచి కదియున్ వేదండయూథోత్తమున్.

మ. పొడగానం బడకుండ డాఁగు వెలికిం బోవంగఁ దానడ్డమై,
పొడచూపుం జరణంబులం బెనఁగొనుం బోరాక రారాక బె
గ్గడిలం గూలఁగఁ దాఁచు లేఁచు తటి నుద్ఘాటించు లంఘించు, బ
ల్విడిఁ జీరుం దలఁగున్ మలంగు నొడియు న్వేధించుఁ గ్రోధించుచున్.

వ. ఇట్లు విస్మితనక్రచక్రంబయి నిర్వక్రవిక్రమంబున నల్ప హృదయజ్ఞాన దీపంబు నతిక్రమించు మహామాయాంధ కారంబునుం బోలె నంతకంతకు నుత్సాహకలహసన్నాహ బహువిధజలావగాహం బయిన గ్రాహంబును మహాసాహ సంబున,

 28

శా. పాదద్వంద్వము నేలమోపి పవనుంబంధించి పంచేంద్రియో
న్మాదంబుం బరిమార్చి బుద్ధిలతకు న్మాఱాకు హత్తించి ని
ష్ఖేదబ్రహ్మపదావలంబనగతిన్ గ్రీడించు యోగీంద్రుమ
ర్యాదన్నక్రము విక్రమించెఁ గరిపాదాక్రాంతినిర్వక్రమై. 29

ఆ. వనగజంబుఁ దిగుచు వనచారిఁ బొడగని
వనగజంబ కాన వజ్రిగజము
వెల్లనై సురేంద్రు వేసి సుధాంధులు
పట్టఁ బట్టనీక బయలు ప్రాఁకె. 30

ఉ. ఊహ కలంగి జీవనపు టోలమునంబడి పోరుచు న్మహా
మోహలతానిబద్ధపదము న్విడిపించుకొనంగ లేక సం
దేహముఁ బొందు దేహిక్రియ దీనదశన్ గజముండె భీషణ
గ్రాహదురంతదంతపరిఘట్టితపాదఖురాగ్రశల్యమై. 31

వ. ఇవ్విధంబున, 32

క. అలయక సొలయక వేసట
నొలయక కరి మకరితోడ నుద్దండత రా
తులు సంధ్యలు దివసంబులు
సలిపెం బోరొక్క వేయి సంవత్సరముల్. 33

మ. పృథుశక్తిం గజమాజల గ్రహముతోఁ బెక్కేండ్లు
పోరాడి సం
శిథిలంబై తనలావు వైరి బలముం జింతించి మిథ్యామనో
రథమింకేఁటికి దీని గెల్వ సరి పోరం జాలరాదంచు న
వ్యథమైయిట్లనుఁ బూర్వపుణ్యఫల దివ్యజ్ఞానసంపత్తితోన్

శా. ఏరూపంబున దీనిగెల్తు నిటమీఁ దేవేల్పుఁ జింతింతు న
వ్వారిం జీరుదు నెవ్వ రడ్డ మికఁ నివ్వారిప్రచారోత్తము
న్వారింపందగువార లెవ్వ రఖిల వ్యాపార పారాయణుల్
లేరే ముక్కుఁదిక్కుఁ మాలిన మొరాలింపం
బ్రపుణ్యాత్మకుల్. 35

శా. నానానేక పయోథముల్వనములోనం బెద్దకాలంబు స
న్మానింపన్దశలతకోటికరిణీ నాథుండ నై యుండి మ
ద్దానాంభఃపరిపుష్టచందనలతాంతచ్ఛాయలం దుండ లే
కీనీరాస నిటేల వచ్చితి భయం బెట్లోక దే యీశ్వరా. 36

ఉ. ఎవ్వనిచే జనించు జగ మెవ్వనిలోపలనుండు లీనమై
యెవ్వనియందుడిందుఁబర మేశ్వరుఁడెవ్వఁడు మూలకారణం
బెవ్వఁడనాదిమధ్యలయుఁ డెవ్వఁడు సర్వముదానయైనవాఁ
డెవ్వఁడు వాని నాత్మభవు నీశ్వరు నే శరణంబు వేఁడెదన్. 37

క. ఒకపరి జగముల వెలి నిడి
యొకపరి లోపలికిఁ గొనుచు నుభయముఁ గనుచున్
సకలార్థసాక్షి యగున
య్యకలంకుని నాత్మమయుని నర్థింతు మదిన్. 38

క. లోకంబులు లోకేశులు
లోకస్థులుఁ దెగినఁ దుది నలోకం బగు పెం
జీకటి నెవ్వఁడు వెలిఁగెడు
నేకాకృతితోడ నతని నే సేవింతున్. 39

క. నర్తకుని భంగిఁ బెక్కగు
మూర్తులలో నెవ్వఁ డాడు మునులును దివిజుల్
గీర్తింప నేర రెవ్వని
వర్తన మొరు లెఱుఁగ రట్టి వాని నుతింతున్. 40

ఆ. ముక్తసంగు లైన మునులు దిదృక్షులు
సర్వభూతహితులు సాధుచిత్తు
లసదృశ వ్రతాఢ్యు లై కొల్తు రెవ్వని
దివ్యపదము వాఁడు దిక్కు నాకు. 41

సీ. భవము దోషంబు రూపంబు కర్మంబునా
హ్వయమును గుణము లెవ్వనికి లేక
జగములఁ గలిగించు సమయించుకొఱకు నై
నిజమాయ నెవ్వఁ డన్నియును దాల్చు
నా పరేశునకు ననంతశక్తికి బ్రహ్మ
కిద్ధరూపికి రూపహీనునకును
జిత్రచారునకు సాక్షికి నాత్మరుచికినిఁ
బరమాత్మునకుఁ బరబ్రహ్మమునకు

ఆ. మాటల నెఱుకల మనములఁ జేరంగ
రాని శుచికి సత్త్వరమ్యుఁ డగుచు
నిపుణు లైనవారి నిష్కర్మతకు మెచ్చు
వాని కే నొనర్తు వందనములు. 42

సీ. శాంతున కపవర్గ సౌఖ్యసంవేదికి
నిర్వాణభర్తకు నిర్విశేషు

నకు ఘోరునకు గూఢునకు గుణధర్మికి
సౌమ్యున కధిక విజ్ఞానమయున
కఖిలేంద్రియద్రష్ట కధ్యక్షునకు బహు
క్షేత్రజ్ఞునకు దయా సింధుమతికి
మూలప్రకృతి కాత్మ మూలున కఖిలేంద్రి
యజ్ఞాపకునకు దుఃఖాంతకృతికి

ఆ. నెఱి నసత్య మనెడి నీడతో వెలుఁగుచు
నుండు నెక్కటికి మహోత్తరునకు
నిఖిల కారణునకు నిష్కారణునకు న
మస్కరింతు నన్ను మనుచుకొఱకు. 43

క. యోగాగ్ని దగ్ధ కర్ములు
యోగీశ్వరు లేమహాత్ము నొండెఱుఁగక స
ద్యోగ విభాసితమనముల
బాగుగ నీక్షింతు రట్టి పరము భజింతున్. 44

సీ. సర్వాగమామ్నాయ జలధికి నపవర్గ
మయునికి నుత్తమ మందిరునకు
సకలగుణారణి చ్ఛన్న బోధాగ్నికిఁ
దనయంత రాజిల్లు ధన్యమతికి
గుణలయోద్దీపిత గురుమానసునకు సం
వర్తితకర్మ నిర్వర్తితునకు
దిశలేని నాబోఁటి పశువులపాపంబు
లణఁచువానికి సమస్తాంతరాత్మ

ఆ. డై వెలుంగువాని కచ్ఛిన్నునకు భగ
వంతునకుఁ దనూజ పశునివేళ
దారుసక్తులయిన వారి కందఁగరాని
వాని కాచరింతు వందనములు. 45

వ. మఱియును. 46

సీ. పరధర్మ కామార్థ వర్జితకాములై
విబుధు లెవ్వాని సేవింతు రిష్ట
గతిఁ బొందుదురు చేరి కాంక్షించువారి క
వ్యయదేహ మిచ్చు నెవ్వాఁడు కరుణ
ముక్తాత్ము లెవ్వని మునుకొని చింతింతు
రానందవార్ధి మగ్నాంతరంగు
లేకాంతు లెవ్వని నేమియుఁ గోరక
భద్రచరిత్రంబుఁ బాడుచుందు

ఆ. రామహేశు నాద్యు నవ్యక్తు నధ్యాత్మ
యోగగమ్యుఁ బూర్ణు నున్నతాత్ము
బ్రహ్మమైనవానిఁ బరుని నతీంద్రియు
నీశు స్థూలు సూక్ష్ము నే భజింతు. 47

వ. అని మఱియు నిట్లనియె. 48

సీ. పావకుం డర్చుల భానుండు దీప్తుల
నెబ్భంగి నిగిడింతు రెట్లడంతు
రాక్రియ నాత్మక రావళిచేత బ్ర
హ్మాదుల వేల్పుల నఖిలజంతు

గణముల జగముల ఘననామరూప భే
దములతో మెఱయించి తగనడంచు
నెవ్వఁడు మనము బుద్ధీంద్రియంబులు దాన
నైగుణసంప్రవాహంబు నెఱపు
తే. స్త్రీ నపుంసక పురుషమూర్తియును గాక
తిర్యగమరనరాదిమూర్తియును గాక
కర్మగుణభేదసదసత్ప్రకాశి గాక
వెనుక నన్నియుఁ దానగు విభునిఁ దలఁతు. 49

క. కలఁ డందురు దీనులయెడఁ
గలఁ డందురు పరమయోగి గణములపాలన్
గలఁ డందు రన్నిదిశలను
కలఁడు కలం డనెడువాఁడు కలఁడో లేఁడో. 50

సీ. కలుఁగఁడే నాపాలి కలిమి సందేహింపఁ
గలిమిలేములు లేక కలుగువాఁడు
నా కడ్డపడరాఁడె నలి నసాధువులచేఁ
బడిన సాధుల కడ్డపడెడువాఁడు
చూడఁడే నాపాటుఁ జూపులఁ జూడక
చూచువారలఁ గృపఁ జూచువాఁడు
లీలతో నా మొఱాలింపఁడే మొఱఁగుల
మొఱ లెఱుంగుచుఁ దన్ను మొఱఁగువాఁడు
తే. అఖిలరూపులుఁ దనరూపమైనవాఁడు
ఆదిమధ్యాంతములు లేక యడరువాఁడు

భక్తజనముల దీనుల పాలివాఁడు
వినఁడె చూడఁడే తలఁపఁడే వేగరాఁడె. 51

క. విశ్వకరు విశ్వదూరుని
విశ్వాత్ముని విశ్వవేద్యు విశ్వు నవిశ్వున్
శాశ్వతు నజు బ్రహ్మప్రభు
నీశ్వరునిం బరమపురుషు నే సేవింతున్. 52

వ. అని పలికి తనమనంబున నగ్గజేంద్రుండీశ్వరసన్నిధానంబుఁ
గల్పించుకొని యి ట్లనియె. 53

శా. లా వొక్కింతయు లేదు ధైర్యము విలోలంబయ్యె ప్రాణంబులున్
ఠావుల్దప్పెను మూర్ఛ వచ్చెఁ దనువున్ డస్సెన్ శ్రమంబయ్యెడిన్
నీవే తప్ప నితఃపరంబెఱుఁగ మన్నింపం దగుం దీనునిన్
రావే యీశ్వర! కావవే వరద! సంరక్షింపు భద్రాత్మకా!

క. విను దఁట జీవులమాటలు
చను దఁట చనరానిచోట్ల శరణార్థుల కో
యను దఁట పిలిచిన సర్వముఁ
గను దఁట సందేహ మయ్యెఁ గరుణావార్ధీ. 55

ఉ. ఓ కమలాక్ష యోవరద యోప్రతిపక్షవిపక్ష యీశ్వరా
యోకవియోగివంద్యసుగుణోత్తమ యోశరణాగతామరా
నోకహ యోమునీశ్వరమనోహర యోవిమలప్రభావ రా
వే కరుణింపవే తలఁపవే శరణార్థిని నన్నుఁ గావవే. 56

వ. అని పలికి మఱియు నరక్షితరక్షకుం డైనయీశ్వరుం డాప
న్నుండైన నన్నుం గాచుఁగాక యని నింగి నిక్కి చూచుచు
నిట్టూర్పులు నిగిడించుచు బయ లాలకించుచు నగ్గజేం
ద్రుండు మొఱ సేయుచున్న సమయంబున. 57

ఆ. విశ్వమయత లేమి వినియు నూఱక యుండి
రంబుజాసనాదు లడ్డపడక
విశ్వమయుఁడు విభుఁడు విష్ణుండు జిష్ణుండు
భక్తియుతున కడ్డపడఁ దలంచె. 58

మ. అల వైకుంఠపురంబులో నగరిలో నామూలసౌధంబుదా
పల మందారవనాంత రామృతసరః ప్రాంతేందు
కాంతోపలో
త్పలపర్యంకరమావినోది యగునాపన్న ప్రసన్నుండు వి
హ్వలనాగేంద్రము పాహిపాహియనఁగుయ్యాలించి
సంరంభియై. 59

మ. సిరికిం జెప్పఁడు శంఖచక్రయుగముం జేదోయిసంధింపఁడే
పరివారంబును జీరఁ డభ్రగపతిం బన్నింపఁ డాకర్ణికాం
తరధమ్మిల్లముఁ జక్కనొత్తఁడు వివాదప్రోద్ధతశ్రీకుచో
పరిచేలాంచల మైన వీడఁడు గజప్రాణావనోత్సాహియై. 60

వ. ఇట్లు భక్తజనపాలన పరాయణుండును నిఖిలజంతు హృద
యారవిందసదన సంస్థితుండును నగు నారాయణుండు కరి
కులేంద్ర విజ్ఞాపిత నానావిధ దీనాలాపంబు లాకర్ణించి
లక్ష్మీకాంతా వినోదంబులం దగులు సాలించి సంభ్రమించి

దిశలు నిరీక్షించి గజేంద్రరక్షాపరత్వంబు నంగీకరించి నిజపరికరంబు మరల నవధరించి గగనంబున కుద్గమించి వేంచేయునప్పుడు. 61

మ. తనవెంట న్సిరి లచ్చివెంట నవరోధవ్రాతము న్దాని వె
న్కను బక్షీంద్రుఁడు వానిపొంతను ధనుఃకౌమోదకీశంఖచ
క్రనికాయంబును నారదుండు ధ్వజినీ కాంతుండురావచ్చిరో
య్యన వైకుంఠపురంబునం గలుగువా రాబాల
గోపాలమున్. 62

వ. తదనంతరంబముఖారవిందమకరంద బిందుసందోహ పరిష్యందమానానందదిందిందిర యగు నయ్యిందిరాదేవి గోవిందకర సమాకృష్యమాణసంవ్యాన చేలాంచలయై పోవుచు. 63

మ. తన వేంచేయుపదంబుఁ బేర్కొనఁడనాథ
స్త్రీజనాలాపముల్
వినెనో ముచ్చులు ముచ్చిలించిరొ ఖలు ల్వేద
ప్రపంచంబులన్
దనుజానీకము దేవతానగరిపై దండెత్తెనో భక్తులం
గని చక్రాయుధుఁ డేఁడి చూపుఁడని ధిక్కారించిరో
దుర్జనుల్. 64

వ. అని వితర్కించుచు. 65

శా. తాటంకాచలనంబుతో భుజనటద్ధమ్మిల్ల బంధంబుతో
శాటీముక్తకుచంబుతో నదృఢచంచత్కాంచితో శీర్ణలా

లాటాలేపముతో మనోహరకరాలగ్నోత్తరీయంబుతోఁ
గోటీందుప్రభతో నురోజభరసంకోచద్విలగ్నంబుతోన్.

క. అడిగెదనని కడువడిఁ జను
నడిగినఁ దను మగుడ నుడువఁడని నడ యుడుగున్
వెడవెడఁ జిడిముడి తడఁబడ
నడు గిడు నడు గిడుదు జడిమ నడు గిడునెడలన్. 67

సీ. నిటలాలకము లంట నివుర ఝుంఝుమ్మని
ముఖసరోజము నిండ ముసరుఁ దేటు
లళులఁ జోఁపఁగ జిక్క లల్లనల్లనఁ జేరి
యోష్ఠబింబద్యుతు లోడియ నులుకు
శుకములఁ దోలఁ జతుర్మీనములకు మం
దాకినీపాఠీన లోక మెసఁగు
మీనపంక్తులు దాఁట మెయిదీగెలో రాయ
శంపాలతలు మింట సరణిగట్టు

ఆ. శంపలను జయింపఁ జక్రవాకంబులు
కుచయుగంబుఁ దాఁకి క్రొవ్వు సూపు
మెలఁత మొగులుపిఱిఁది మెఱుఁగుదీగెయుఁబోలె
జలదవర్ణువెనుకఁ జనెడు నపుడు 68

మ. వినువీథిం జను దేరఁ గాంచి రమరుల్ విష్ణుప్పురారాతిజీ
వనసంపత్తినిరాకరిష్ణుఁ గరుణావర్ధిష్ణు యోగీంద్రహృ
ద్వనవర్తిష్ణు సహిష్ణు భక్తజనబృందప్రాభవాలంకరి
ష్ణు నవోఢోల్లసదిందిరాపరిచరిష్ణున్ జిష్ణురోచిష్ణునిన్. 69

వ. ఇట్లు పొడగని. 70

మ. చనుదెంచెన్ ఘనుఁడల్లవాఁడె హరిపజ్జంగంటిరేలక్ష్మి శం
ఖనినాదం బదె చక్రమల్లదె భుజంగధ్వంసియున్వాఁడె క్ర
న్నన నేతెంచె నటంచు వేల్పులు నమో
నారాయణాయేతి ని
స్స్వనులై మ్రొక్కిరి మింట హస్తిదురవస్థావక్రికిం జక్రికిన్.

వ. అయ్యవసరంబునఁ గజేంద్రపాలన పారవశ్యంబున
దేవతానమస్కారంబు లంగీకరింపక మనస్సమానసంచా
రుండై పోయి పోయి కొంతదూరంబున శింశుమార
చక్రంబునుంబోలె గురుమకరకుళీరమీనమిథునంబై కిన్న
రేంద్రుని భాండాగారంబునుంబోలె స్వచ్ఛవరకచ్ఛపం బై
భాగ్యవంతుని భాగధేయంబునుంబోలె బరాగజీవనం బై
వైకుంఠపురంబునుంబోలె శంఖచక్రకమలాలంకృతం బై
సంసారప్రకారంబునుంబోలె ద్వంద్వసంకులపంకసంకీర్ణంబై
యొప్పునప్పంకజాకరంబుఁ బొడగని. 72

మ. కరుణాసింధుఁడు శౌరి వారిచరమున్ ఖండింపఁగాఁ
బంపె స
త్వరితాకంపితభూమిచక్రము మహోద్యద్విస్ఫులింగచ్ఛటా
పరిభూతాంబరశుక్రము న్బహువిధ బ్రహ్మాండభాండ
చ్ఛటాం
తరనిర్వక్రముఁ బాలితాఖిలసుధాంధశ్చక్రమున్
జక్రమున్. 73

వ. అట్లు పంచిన. 74

శా. అంభోజాకరమధ్యనూతననళిన్యాలింగనక్రీడనా
రంభుండైన వెలుంగుఱేని చెలువార న్వచ్చి నీటన్గభు
ల్గుంభధ్వానముతోఁ గొలంకువు కలంకుంబొందఁగాఁ జొచ్చి దు
ష్టాంభోవర్తి వసించు చక్కటికి డాయంబోయి హృద్వేగమై. 75

శా. భీమంబై తలఁ ద్రుంచి ప్రాణములఁ బాపెం జక్ర మాశుక్రియన్
హేమక్ష్మాధర దేహమున్ జకిత వన్యేభేంద్ర సందోహమున్
గామక్రోధన గేహమున్ గరటిరక్తస్రావగాహంబు నీ
స్సీమోత్సాహము వీతదాహము జయ శ్రీమోహమున్ గ్రాహమున్. 76

వ. ఇట్లు నిమిషస్పర్శనంబున సుదర్శనంబు మకరితలఁ ద్రుంచు నవసరంబున. 77

క. మకర మొకటి రవిఁ జొచ్చెను
మకరము మఱియొకటి ధనదు మాటున డాఁగెన్
మకరాలయమునఁ దిరిగెడు
మకరంబులు కూర్మ రాజు మఱువున కరిగెన్. 78

మ. తమముం బాసినరోహిణీవిభుక్రియన్ దర్పించి సంసారచ
క్రము వీడ్కొన్న విరక్తచిత్తునిగతి న్గ్రాహంబుపట్టూడ్చి పా

దములల్లార్చిక రేణుకావిభుఁడు సౌందర్యంబుతో నొప్పె సం
భ్రమదాశాకరిణీకరోజ్ఝితసుధాంభఃస్నాన విశ్రాంతుఁడై.

శా. పూరించెన్ హరి పాంచజన్యము సుధాంభోరాశి
సౌజన్యము
న్భూరిధ్వానచలాచలీకృతమహా భూతప్రచైతన్యమున్
సారోదారసిత ప్రభాచకితపర్జన్యాది రాజన్యమున్
దూరీభూతవిపన్న దైన్యమును నిర్ధూతద్విషత్సైన్యమున్.

మ. మొరసెన్నిర్జరదుందుభుల్ జలరుహామోదంబులై
వాయువుల్
దిరిగెం బువ్వులవానజల్లుగురిసెన్ దేవాంగనాలాస్యముల్
పరఁగెన్ దిక్కులఁ బిక్కటిల్లి జయశబ్దధ్వానముల్
నిండె సా
గరముప్పొంగెఁ దరంగ చుంబితనభోగంగాముఖాంభోజమై.

క. నిడుదయగు కేల గజమును
మడువున వెడలంగఁ దిగిచి మదజలరేఖల్
దుడుచుచు మెల్లనఁ బుడుకుచు
నుడిపెను విష్ణుండు దుఃఖ ముర్వీనాథా. 82

క. శ్రీహరికరసంస్పర్శను
దేహముదాహంబు మాని ధృతిఁ గరిణీసం
దోహము దానును గజపతి
మోహనఘీంకారశబ్దములతో నొప్పెన్. 83

క. కరముల మెల్లన నివురుచుఁ
గర మనురాగమున మెఱసి కలయంబడుచున్
గరి హరికతమున బ్రదికినఁ
గరపీడన మాచరించెఁ గరిణులు మఱలన్. 84

సీ. జననాథ! దేవల శాపవిముక్తుఁడై
పటుతరగ్రాహరూపంబు మాని
ఘనుఁడు హూహూనామ గంధర్వుఁ డప్పుడు
తనతొంటినిర్మల తనువుఁ దాల్చి
హరికి నవ్యయునకు నతిభక్తితో మ్రొక్కి
తవిలి కీర్తించి గీతములు పాడి
యా దేవుకృపనొంది యందంద మఱియును
వినతశిరస్కుఁడై వేడ్కతోడ
ఆ. దళితపాపుఁ డగుచుఁ దనలోకమున కేఁగె
నపుడు శౌరి కేల నంటి తడవ
హస్తిలోకనాథుఁ డజ్ఞానరహితుఁడై
విష్ణురూపుఁ డగుచు వెలుఁగుచుండె. 85

మ. అవనీనాథ! గజేంద్రుఁడై మకరితో నాలంబు గావించె
మున్
ద్రవిడాధీశుఁ డతండు పుణ్యాతముఁ డింద్రద్యుమ్న
నాముండు వై
ష్ణవముఖ్యుండు గృహీత మౌననియతిన్ సర్వాత్మ
నారాయణున్
సవిశేషంబుగఁ బూజసేసెను మహాశైలాగ్ర భాగంబునన్.

మ. ఒకనాఁ డానృపుఁ డచ్యుతున్మనములో నూహించుచు
నౌ్మనియై,
యకలంకస్థితి నున్నచోఁ గలశజుం డచ్చోటికిన్వచ్చి లే
వక పూజింపకయున్న హాని గని నవ్యక్రోధుఁడై.
మూఢ లు
బ్ధ! కరీంద్రోత్తమయోనిఁ బుట్టు మని శాపంబిచ్చె
భూవల్లభా. 87

క. మునిపతి నవమానించిన
ఘనుఁ డింద్రద్యుమ్న విభుఁడు కౌంజరయోనిన్
జననం బందెను విప్రులఁ
గని యవమానింపఁ దగదు ఘనపుణ్యులకున్. 88

క. కరినాథుఁ డయ్యె నాతఁడు
కరులైరి భటాదులెల్ల గజముగ నయ్యున్
హరిచరణ సేవకతమునఁ
గరివరునకు నధికముక్తి గలిగె నరేంద్రా! 89

ఆ. కర్మతంత్రుఁడగుచుఁ గమలాక్షుఁగొల్చుచు
నుభయనియతవృత్తి నుండెనేని
జెడును గర్మమెల్ల శిథిలమై మెల్లనఁ
బ్రబలమైన విష్ణుభక్తి చెడదు. 90

క. చెడుఁ గరులు హరులు ధనములు
చెడుదురు నిజసతులు సుతులు చెడుచెనఁటులకున్
జెడక మను నెఱసుగుణులకుఁ
జెడనిపదార్థములు విష్ణుసేవానిరతుల్. 91

